ಖಾಸಗೀ ಪ್ರಚಾರಕ್ಕಾಗಿ


## ಮಾನವಿ

ಸಂಪುಟ : 1 ಸಂಚಿಕೆ : 5

ವಿಶೇಷ ಸಂಚಿಕೆ 1986

**ಸಂಪಾದಕೀಯ ಮಂಡಲಿ**

ಜಿ. ಕೆ. ಸಾವಿತ್ರಿ, ಎಚ್. ಎಸ್. ಚಂಪಾವತಿ
ಎಚ್. ಎಸ್. ರಾಜೇಶ್ವರಿ, ವೇದವತಿ

**ಸಲಹೆ—ಸಹಕಾರ**

ವಿಜಯಾ

**ವಿಳಾಸ : "ಮಾನವಿ"**

ನಂ. 645/2–ಎಲ್, ಮಹಡಿ
ಮಾರುತಿ ಕಲ್ಯಾಣ ಮಂಟಪ
ಬಾಣಸವಾಡಿ ಮುಖ್ಯರಸ್ತೆ,
ಮಾರುತಿ ಸೇವಾನಗರ ಅಂಚೆ
ಬೆಂಗಳೂರು–560 033.

**ಸೂಚನೆ :** ವಾರ್ಷಿಕ ಚಂದಾ : 15 ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಏಳು ಸಂಚಿಕೆಗಳು
ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ. ಓ.
ಮೂಲಕ ಸ್ವೀಕರಿಸಲಾಗುವುದು.


**ಈ ಸಂಚಿಕೆಯಲ್ಲಿ................**



ಮುಖಪುಟ : ಮಕಾಳಿ



## ಸಂಪಾದಕೀಯ

ಎಲ್ಲೆಲ್ಲೂ ಕಾರ್ಮಿಕರ ಹಾಗೂ ಮಹಿಳಾ ದಿನಾಚರಣೆಗಳು ಸಂಭ್ರಮದಿಂದ ನಡೆದುಹೋದ ಈ ಸಂದರ್ಭದಲ್ಲಿ ದುಡಿಯುವ ಮಹಿಳೆಯರಿಗೆ ಸಂಬಂಧಿಸಿದಂತೆ ಮಹಿಳಾ ಚಳವಳಿ ತನ್ನ ಗುರುತರವಾದ ಜವಾಬ್ದಾರಿಯನ್ನು ಗುರುತಿಸಬೇಕಾಗಿದೆ.

1974ರಲ್ಲಿ ಹೊರಬಂದ ಮಹಿಳೆಯರ ಸ್ಥಾನಮಾನ ಕುರಿತ ಸರ್ಕಾರದ ವರದಿ "ಟುವರ್ಡ್ಸ್ ಈಕ್ವಾಲಿಟಿ" ಕ್ಷೀಣಗೊಳ್ಳುತ್ತಿರುವ ಮಹಿಳಾ ಸಮಸ್ಯೆಯನ್ನು ಬೆಳಕಿಗೆ ತರುವುದರ ಜೊತೆಗೆ ಅನೇಕ ಕಾರಣಗಳಿಂದ ಎಲ್ಲಾ ಕ್ಷೇತ್ರಗಳ ಶ್ರಮಶಕ್ತಿಯಲ್ಲಿ ಮಹಿಳೆಯರ ಪಾಲುಗೊಳ್ಳುವಿಕೆ ಕಡಿಮೆಯಾಗುತ್ತಿರುವುದನ್ನು ಸಹ ಗಮನಿಸಿತು. ಆರ್ಥಿಕ ಅಭಿವೃದ್ಧಿಗಾಗಿ ವ್ಯವಸಾಯದಲ್ಲಿ ಹಾಗೂ ಕಾರ್ಖಾನೆಗಳಲ್ಲಿ ಭಾರತ ಆಯ್ಕೆ ಮಾಡಿಕೊಂಡ ಯಾಂತ್ರಿಕೀಕರಣ ಮಹಿಳೆಯರ ಉದ್ಯೋಗದ ಮೇಲೆ ಋಣಾತ್ಮಕ ಪರಿಣಾಮ ಬೀರಿದುದನ್ನು ಬೆಳಕಿಗೆ ತಂದಿತು. ಜೊತೆಗೆ 1975-85ರಲ್ಲಿ ಬಂದ ಮಹಿಳಾ ಅಧ್ಯಯನಗಳು ವ್ಯವಸಾಯದಲ್ಲಿ, ಟೆಕ್ಸ್‌ಟೈಲ್ಸ್, ಗಣಿ ಉದ್ಯಮ, ಫಾರ್ಮಸುಟಿಕಲ್ಸ್, ಸಣ್ಣ ಕೈಗಾರಿಕೆಗಳಾದ ನಾರು ಉದ್ಯಮ, ಹ್ಯಾಂಡ್‌ಲೂಂ, ನೇಯ್ಗೆ ಮತ್ತು ಚರಕ, ಮೀನುಗಾರಿಕೆ, ಟೊಬ್ಯಾಕೋ ಮುಂತಾದುವುಗಳಲ್ಲಿ ಉಂಟಾದ ಯಾಂತ್ರಿಕೀಕರಣದಿಂದ ಮಹಿಳೆಯರು ನಿರುದ್ಯೋಗಿಗಳಾಗಿರುವುದನ್ನು ತೋರಿಸುತ್ತವೆ. 1911ರಲ್ಲಿ ಮಹಿಳೆಯರ ಉದ್ಯೋಗದ ಒಟ್ಟು ಪಾಲುಗೊಳ್ಳುವಿಕೆ 12.6% ನಷ್ಟು ಇದ್ದರೆ, 1981ರಲ್ಲಿ 13.9% ನಷ್ಟು ಮಾತ್ರ ಕಾಣಿಸಿಕೊಂಡಿತ್ತು. ಅವರ ಸಹ ಕಾರ್ಮಿಕರಾದ ಪುರುಷ ಉದ್ಯೋಗಿಗಳಿಗೆ ಹೋಲಿಸಿದಲ್ಲಿ, ಮಹಿಳಾ ಕಾರ್ಮಿಕರನ್ನು ಕಡಿಮೆ ವೇತನದ, ಅಗ್ಗಬೆಲೆಯ, ಪರಿಣಿತವಿಲ್ಲದ ಪೂರಕ ಶ್ರಮಶಕ್ತಿಯಾಗಿ ಬಳಸಿಕೊಳ್ಳಲಾರಂಭವಾಯಿತು.

ಸಂಘಟಿತ ಕ್ಷೇತ್ರಗಳಾದ ಕಾರ್ಖಾನೆಗಳಲ್ಲಿ ಇಪ್ಪತ್ತರ ದಶಕದಲ್ಲಿ ಟೆಕ್ಸ್‌ಟೈಲ್ಸ್, ಗಣಿ ಹಾಗೂ ಪ್ಲಾಂಟೇಶನ್‌ಗಳಲ್ಲಿ ಉತ್ಪಾದನೆ ಹೆಚ್ಚಿಸಲು ಬೆನ್ನೆಲುಬಾದ ಮಹಿಳಾ ಶ್ರಮಶಕ್ತಿ ಮೂವತ್ತರ ದಶಕದಲ್ಲಿ ತನ್ನ ನೆಲೆ ಕಳೆದುಕೊಳ್ಳತೊಡಗಿತು. ಪ್ರಾರಂಭಗೊಂಡ ಯಾಂತ್ರಿಕೀಕರಣದಲ್ಲಿ ಮಹಿಳಾ ಕಾರ್ಮಿಕರು 30ರ ದಶಕದಲ್ಲಿ ಮಾತ್ರ ಬಲಿಪಶುಗಳಾಗಲಿಲ್ಲ, ಅವರು ಇಂದಿಗೂ ಸಹ ಇಂತಹ ಸಂಘಟಿತ ಕ್ಷೇತ್ರದ ಕಾರ್ಖಾನೆಗಳಲ್ಲಿ ಬಹುಪಾಲು ದಿನಗೂಲಿ ಕಾರ್ಮಿಕರುಗಳಾಗಿ ದುಡಿಯುತ್ತಿದ್ದಾರೆ. 1951 ಹಾಗೂ 1971ರಲ್ಲಿ 20% ನಷ್ಟು ಮಹಿಳೆಯರ ಪಾಲುಗೊಳ್ಳುವಿಕೆ ಈ ಕ್ಷೇತ್ರದಲ್ಲಿ ಕಡಿಮೆಯಾದುದನ್ನು ಗಮನಿಸಬಹುದು.

'ಕಂಪ್ಯೂಟರೈಜೇಶನ್' ಹಾಗೂ 'ವರ್ಡ್ಸ್ ಪ್ರಾಸೆಸರ್ಸ್' ಬಳಕೆಗಳು ಮಹಿಳಾ ಕ್ಲರ್ಕ್ಸ್,

ಅಕೌಂಟೆಂಟ್ಸ್, ಟೈಪಿಸ್ಟ್, ಟೆಲಿಫೋನ್ಸ್ ಮತ್ತಿತರ ವ್ಯಾವಹಾರಿಕ ಕೆಲಸಗಳಲ್ಲಿ ಬಹುಪಾಲು ಕೇಂದ್ರೀಕೃತಗೊಂಡಿರುವ ಮಹಿಳೆಯರ ಉದ್ಯೋಗದ ಅವಕಾಶಗಳನ್ನು ಕಸಿದುಕೊಳ್ಳುತ್ತಿವೆ.

ರಫ್ತು ಪ್ರಾಮುಖ್ಯವಾದ ವಸ್ತುಗಳ ತಯಾರಿಕೆಯಲ್ಲಿ ಕೆಲಸ ಮಾಡುವ ಮಹಿಳಾ ಕಾರ್ಮಿಕರ ಸ್ಥಿತಿ ಇದರಿಗಿಂತ ಏನೂ ಭಿನ್ನವಾಗಿಲ್ಲ. ಇವರು ಬರಿಯ ಭಾರತದ ಬಂಡವಾಳಶಾಹಿಗಳಿಂದ ಮಾತ್ರವಲ್ಲ, ವಿದೇಶೀಯ ಬಂಡವಾಳಶಾಹಿಗಳ ನೇರ ಶೋಷಣೆಗೆ ಒಳಗಾಗುತ್ತಿದ್ದಾರೆ. ಮಹಿಳೆಯರ 'ಕೋಮಲ ಬೆರಳುಗಳು' 'ತಾಳ್ಮೆ ಶಕ್ತಿ' 'ವಿಧೇಯತೆ' ಇಂತಹವುಗಳನ್ನು ಬಳಸಿಕೊಳ್ಳುವ ಇವರು ಮಹಿಳಾ ಕಾರ್ಮಿಕರನ್ನು ಅತ್ಯಂತ ಅಗ್ಗ ಬೆಲೆಯ ಶ್ರಮಶಕ್ತಿಯನ್ನಾಗಿ ಪರಿವರ್ತಿಸಿದ್ದಾರೆ. ಶ್ರೀಲಂಕಾದಲ್ಲಿ ಹೆಚ್ಚಾಗುತ್ತಿರುವ ಸ್ವತಂತ್ರ್ಯ ವ್ಯವಹಾರ ಸ್ಥಳಗಳು [Free trade zones] , ಭಾರತದಲ್ಲಿ ಹೆಚ್ಚಾಗುತ್ತಿರುವ ರಫ್ತು ಪ್ರಾಮುಖ್ಯವುಳ್ಳ ಉಡುಪು ಕಾರ್ಖಾನೆಗಳು ಇದಕ್ಕೆ ಉದಾಹರಣೆಯಾಗಿವೆ. ಆಧುನಿಕ ಕೈಗಾರಿಕಾ ಕಾರ್ಖಾನೆಗಳಾದ ಎಲೆಕ್ಟ್ರಾನಿಕ್, ಫಾರ್ಮಸುಟಿಕಲ್ಸ್‌ನಲ್ಲಿರುವ ಮಹಿಳೆಯರ ಸ್ಥಿತಿಯೂ ಹೀಗೆಯೇ. ಈ ಎಲ್ಲಾ ಕಾರ್ಖಾನೆಗಳಲ್ಲಿ ಹೆಚ್ಚಾಗುತ್ತಿರುವ 'ಹೋಂ ಇಂಡಸ್ಟ್ರೀ'ಗಳು ಮಹಿಳೆಯರನ್ನು ಹೆಚ್ಚು ಹೆಚ್ಚಾಗಿ 'ಪತ್ನಿತ್ವ'ದ [House wifezation] ಕಡೆಗೆ ತಳ್ಳುವುದಲ್ಲದೇ ಅವರನ್ನು ಕುಟುಂಬದ ಪೂರಕ ಗಳಿಕೆದಾರರು ಎಂದು ವ್ಯಾಖ್ಯಾನಿಸುತ್ತದೆ.

ಬೆಳೆಯುತ್ತಿರುವ ಬಂಡವಾಳಶಾಹಿತ್ವ ಮನೆಗೆಲಸವನ್ನೂ ಸಹ ನಿಧಾನವಾಗಿ ತನ್ನ ಬಾಹುಗಳಲ್ಲಿ ಸೆಳೆದುಕೊಳ್ಳುತ್ತಿದೆ. ಮನೆಯಲ್ಲಿ ಮಾಡುವ ಹೆಚ್ಚು ಹೆಚ್ಚು ಪದಾರ್ಥಗಳನ್ನು ಹೊರಗಡೆ ಮಾರುವ ನಿರುದ್ಯೋಗಿಗಳ ಸಂಖ್ಯೆ ಹೆಚ್ಚು ಹೆಚ್ಚಾಗಿ ಕಂಡು ಬರುತ್ತಿದೆ. ಕುಟುಂಬದ ಸವಲತ್ತುಗಳನ್ನು, ಮಕ್ಕಳ ಪಾಲನೆ–ಪೋಷಣೆಗಳನ್ನು ಗಮನಿಸುವ ಜೊತೆಗೆ ಆರ್ಥಿಕ ಸವಲತ್ತುಗಳಿಗಾಗಿ ಪದಾರ್ಥಗಳನ್ನು ಮಾಡಿ ಮಾರುವ ಜವಾಬ್ದಾರಿಯೂ ಸಹ ಮಹಿಳೆಯರ ಮೇಲೆಯೇ ಹೆಚ್ಚಾಗಿ ಬೀಳುತ್ತಿದೆ. ಮಹಿಳೆಯರ ಒಟ್ಟು ಕೆಲಸದ ಅವಧಿ ಮನೆಯೊಳಗೆ, ಹಾಗೂ ಹೊರಗೆ ತೀರಾ ಹೆಚ್ಚಾಗುತ್ತಿರುವ ಇಂತಹ ಸಂದರ್ಭದಲ್ಲಿ ಮನೆಗೆಲಸ ಉತ್ಪಾದಿತ ಅಂಶ ಹೊಂದಿದೆಯೋ ಅಥವಾ ಅನುತ್ಪಾದಿತ ಅಂಶ ಹೊಂದಿದೆಯೋ ಎಂಬುದನ್ನು ಜೊತೆಗೆ ಇದು ಕೇವಲ 'ಉಪಯುಕ್ತ' ಮೌಲ್ಯ ಹೊಂದಿದೆಯೋ ಅಥವಾ 'ಉಳಿತಾಯದ' ಮೌಲ್ಯ ಹೊಂದಿದೆಯೋ ಎಂಬಂತಹ ಚರ್ಚೆಗಳು ಮಹಿಳಾ ಚಳವಳಿಯಲ್ಲಿ ಪ್ರಾರಂಭವಾಗಬೇಕಾಗಿದೆ.

ನಾಶವಾಗುತ್ತಿರುವ ಕಾಡುಗಳಿಂದಾಗಿ ಅವುಗಳನ್ನೇ ನಂಬಿ ಬದುಕುತ್ತಿರುವ ಆದಿವಾಸಿ ಮಹಿಳೆಯರ ಸ್ಥಿತಿ–ಗತಿಗಳು ಇನ್ನಷ್ಟು ದುರ್ಭರಗೊಳ್ಳುತ್ತಿವೆ.

ಸಂಘಟಿತ ಕ್ಷೇತ್ರಗಳ ಕಾರ್ಖಾನೆಗಳ ಬೆಳವಣಿಗೆಯ ಕುಂಠಿತದಿಂದಾಗಿ ಹೆಚ್ಚು ಹೆಚ್ಚು ಮಹಿಳೆಯರು ಅಸಂಘಟಿತ ಕ್ಷೇತ್ರಗಳಲ್ಲಿ ಕಾರ್ಮಿಕರುಗಳಾಗಿ ಕಾಣಿಸಿಕೊಳ್ಳುತ್ತಿದ್ದಾರೆ. ವ್ಯವಸಾಯದಲ್ಲಿ ನೆಲೆಯೂರಲಾಗದೇ ಪಟ್ಟಣಕ್ಕೆ ವಲಸೆ ಬರುವ ಕುಟುಂಬಗಳ ಮಹಿಳೆಯರು ಇಟ್ಟಿಗೆ ಬೇಯಿಸುವ, ಕಲ್ಲು ಒಡೆಯುವ, ಬೀಡಿ ಕಟ್ಟುವ, ಹೂ ಮಾರುವ, ಬೀದಿ ಗುಡಿಸುವ ಇಂತಹ ಅನೇಕ ರೀತಿಗಳಲ್ಲಿ ಕೆಲಸ ಮಾಡುವ ಪಟ್ಟಣದ ಬಡತನದ ರೇಖೆಯ ಕೆಳಗಿನ ಮಹಿಳಾ ಕಾರ್ಮಿಕರ ಸ್ಥಿತಿ-ಗತಿಗಳನ್ನು ತಾವೂ ಹಂಚಿಕೊಳ್ಳುತ್ತಾರೆ. ಹೀಗೆ ವಲಸೆ ಬರುವ ಹಾಗೂ ನಗರದ ಬಡ ಮಹಿಳಾ ಕಾರ್ಮಿಕರು ಅಗ್ಗ ಬೆಲೆಯ, ಸುಲಭವಾಗಿ ಶೋಷಿತರಾಗಬಲ್ಲ 'ರಿಸರ್ವ್ ಆರ್ಮಿ ಆಫ್ ಲೇಬರ್' ಆಗಿ ಕಾಣಿಸಿಕೊಳ್ಳುತ್ತಾರೆ.

ಇಂತಹ ಸಂದರ್ಭದಲ್ಲಿ ದುಡಿಯುವ ವರ್ಗದ ಜೊತೆ ಸಂಪರ್ಕ ಹೆಚ್ಚಿಸಿಕೊಳ್ಳಲು ಹಾಗೂ ಹೋರಾಡಲು ಮಹಿಳಾ ಚಳವಳಿ ಒಳಗೊಳ್ಳಬೇಕಾದ ಯೋಜನೆಯ ಬಗ್ಗೆ ಗಂಭೀರವಾಗಿ ಆಲೋಚಿಸಬೇಕಾಗಿದೆ. ಅಸಂಘಟಿತ ಕ್ಷೇತ್ರದ ಮಹಿಳೆಯರ ಸಮಸ್ಯೆಗಳತ್ತ ಬೆಳಕು ಚಲ್ಲುವುದಕ್ಕೆ ಹಾಗೂ ಹೋರಾಡುವುದಕ್ಕೆ ಗುಜರಾತಿನ 'ಸೇವಾ', ಮದ್ರಾಸಿನ 'ವರ್ಕಿಂಗ್ ವುಮನ್ಸ್ ಫೋರಂ', ಮಹಿಳಾ ಕಾರ್ಮಿಕ ಸಂಘಗಳು ಹುಟ್ಟಿಕೊಂಡಿವೆ. ಇವುಗಳ ಏಳಿ–ಕೊಡುಗೆಗಳನ್ನು ಮಹಿಳಾ ಚಳವಳಿ ಗಮನಿಸಿ ಬೆಳೆಯಬೇಕಾಗಿದೆ. ಸಂಘಟಿತ ಕ್ಷೇತ್ರಗಳಲ್ಲಿ ಕಾರ್ಮಿಕ ಸಂಘಗಳು ಮಹಿಳಾ ಸಮಸ್ಯೆಗಳತ್ತ ಗಮನ ನೀಡದಿರುವುದನ್ನು ಇಂದು ಗಂಭೀರವಾಗಿ ಯೋಚಿಸಿ. ಯೋಜನೆಗಳನ್ನು ಹಾಕಿಕೊಳ್ಳಬೇಕಾಗಿದೆ. ದುಡಿಯುವ ವರ್ಗದ ಜೊತೆ ಯಾವ ಹಂತದಲ್ಲಿ, ಹೇಗೆ, ಯಾವ ಯೋಜನೆಗಳ ಮೂಲಕ ಹೋರಾಡಬೇಕೆನ್ನುವುದನ್ನು ಸ್ಪಷ್ಟಪಡಿಸಿಕೊಳ್ಳುವುದು ಭಾರತದ ಮಹಿಳಾ ಚಳವಳಿಯ ತೀರಾ ಅಗತ್ಯವಾದ ಹಾಗೂ ಜರೂರಾದ ಕಾರ್ಯವಾಗಿದೆ.

# ದುಡಿಯುವ ಹೆಣ್ಣು ಮಕ್ಕಳು

ಎಚ್. ಎಸ್. ರಾಜೇಶ್ವರಿ.

ನಮ್ಮ ಸಮಾಜದಲ್ಲಿ ಸ್ತ್ರೀಯರ ಬಗ್ಗೆ ಚಾಲ್ತಿಯಲ್ಲಿರುವ ಧೋರಣೆಗಳು, ಪರಂಪರಾಗತವಾಗಿ ನಡೆದುಬಂದ ನಂಬಿಕೆಗಳು ಈ ಎಳೆಯ ಬಾಲಕಿಯರ ಭವಿಷ್ಯವನ್ನು ರೂಪಿಸುವುದರಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ. ಇತ್ತ ತಾನು ಮುಂದೆ ನಿರ್ವಹಿಸ ಬೇಕಾದ ಜವಾಬ್ದಾರಿಗಳನ್ನು ಎಳೆತನದಲ್ಲಿ ರೂಢಿಸಿಕೊಳ್ಳುವಂತೆ ಮಾಡುವ ಸಮಾಜ ಆ ಪುಟ್ಟ ಹೆಗಲುಗಳ ಮೇಲೆ ಹೊರಲಾರದ ಹೊರೆಯನ್ನು ಹೊರಿಸುತ್ತದೆ.



ಮುಗ್ಧತೆಯ ಲೋಕದ ಮುಗುಳ್ನಗೆಯ ಎಳೆಯ ಕಂಗಳ ಚೆಲುವೆ ವಾಣಿ ಕೇವಲ ಒಂಬತ್ತು ವರ್ಷ ವಯಸ್ಸಿನವಳು. ಬಡತನದ ಬವಣೆಯಿಂದ ಬಳಲುವ ಕುಟುಂಬದ ವಾಣಿ ಐದನೇ ತರಗತಿಯಲ್ಲಿ ಓದುತ್ತಿದ್ದರೂ, ಹಲವಾರು ಕೆಲಸಗಳ ಹೊರೆ ಹೊತ್ತವಳು. ಬೆಳಗ್ಗೆ ಶಾಲೆಗೆ ಹೋಗುವ ಮೊದಲು ಕಸ, ಮುಸುರೆ ಮಾಡಿ, ತಾಯಿ ಮಾಡುವ ಇತರರ ಮನೆಗೆಲಸದಲ್ಲಿ ನೆರವಾಗುತ್ತಾಳೆ. ತಾವು ಸಾಕಿದ ಹಸುಗಳಿಗಾಗಿ ಸಿಟಿ ಮಾರ್ಕೆಟ್‌ನಿಂದ ಎರಡು ಮೂಟೆ ಎಲೆ, ಸೊಪ್ಪುಗಳನ್ನು ಆಯ್ದು ತಂದು ಸ್ಕೂಲಿಗೆ ಹೋಗುತ್ತಾಳೆ. ಸಂಜೆ ಮನೆಗೆ ಮರಳುತ್ತಿದ್ದ ಹಾಗೆಯೇ ಕಾದಿರುವ ಕೆಲಸಗಳು ಈ ಹಸುಳೆಯನ್ನು ಕೈಬೀಸಿ ಸ್ವಾಗತಿಸುತ್ತವೆ.

ಸಿಟಿ ಮಾರ್ಕೆಟ್‌ನಿಂದ ಮೂಟೆ ಹೊತ್ತು ನಡೆದು ಬರುತ್ತಿದ್ದ ವಾಣಿಯನ್ನು ಕಸದ ತೊಟ್ಟಿಗಳು ಆಕರ್ಷಿಸುತ್ತವೆ. ಹೊತ್ತಿದ್ದ ಮೂಟೆಯನ್ನು ಕೆಳಗಿಳಿಸಿ ಕಸದ ತೊಟ್ಟಿಯಲ್ಲಿ ಬಿದ್ದಿದ್ದ ದೊಡ್ಡ ದೊಡ್ಡ ಕಾಗದಗಳನ್ನು ಜೋಪಾನವಾಗಿ ಎತ್ತಿ ತೆಗೆದಿಟ್ಟುಕೊಳ್ಳುತ್ತಿದ್ದ ವಾಣಿಯನ್ನು "ಈ ಪೇಪರ್ಸ್‌ಗಳಿಂದ ಏನು ಮಾಡ್ತೀಯಾ." ಎಂದ್ರೆ, "ನಾನು ಐದನೇ ಕ್ಲಾಸ್ ಪಾಸಾದ್ರೆ ನಮ್ಮ ಅಮ್ಮ ಮುಂದಿನ ವರುಷ ಹೊಸ ಪುಸ್ತಕ ಕೊಡಿಸ್ತಾರೆ. ಅದಕ್ಕೆ ರಟ್ಟು ಹಾಕಲು ಈ ಪೇಪರ್ಸ್ ಎತ್ತಿ ಇಟ್ಕೋಳ್ತ ಇದ್ದೀನಿ." ಭವಿಷ್ಯದ ಆಸೆ, ಕನಸುಗಳನ್ನು ತನ್ನ ಬೊಗಸೆಗಣ್ಣುಗಳಲ್ಲಿ ತುಂಬಿಕೊಂಡ ವಾಣಿ ಹೇಳುತ್ತಾಳೆ: "ಆದ್ರೆ ಫೇಲಾದ್ರೆ ಅವ್ವ ನನ್ನ ಕೆಲಸಕ್ಕೆ ಹಾಕ್ತಾರೆ, ಅದಕ್ಕೆ ನಾನು ಚೆನ್ನಾಗಿ ಓದಿ ಪಾಸು ಮಾಡ್ತೀನಿ." ತನ್ನ ಹೊಳೆಯುವ ಕಣ್ಣಿನ ಹಿಂದಿರುವ ಕ್ರೂರ ವಾಸ್ತವದ ಕಟು ಸತ್ಯವನ್ನೂ ಗ್ರಹಿಸಲಾಗದ ಹುಡುಗಿ ವಾಣಿ.

ಇದು ಕೇವಲ ವಾಣಿಯೊಬ್ಬಳ ಕನಸುಗಳನ್ನು ಕೊಲ್ಲುತ್ತಿರುವ ಸ್ಥಿತಿಯ ಚಿತ್ರಣವಲ್ಲ. ನಮ್ಮ ಸಮಾಜದ ಭವಿಷ್ಯದ ಕಣ್ಣುಗಳಾದ ಸಾವಿರಾರು ವಾಣಿಯರು ಇದಕ್ಕಿಂತ ಅಮಾಯಕ ಸನ್ನಿವೇಶದಲ್ಲಿ ಬದುಕುತ್ತಿದ್ದಾರೆ.

ಕೆಳಜಾತಿ, ಕೆಳವರ್ಗಕ್ಕೆ ಸೇರಿದ ಮಕ್ಕಳ ಸ್ಥಿತಿ ಇತರ ಜಾತಿಯ, ವರ್ಗದ ಮಕ್ಕಳ ಸ್ಥಿತಿಗತಿ, ಸ್ಥಾನಮಾನಕ್ಕಿಂತ ಶೋಚನೀಯವಾದದ್ದು. ಶತಮಾನಗಳಿಂದಲೂ ಶೋಷಣೆಯ ಚಕ್ರಕ್ಕೆ ಸಿಲುಕಿ ನಲುಗುತ್ತಿರುವ ಕುಟುಂಬಗಳ ಈ ಮಕ್ಕಳು ಹುಟ್ಟುತ್ತಲೇ ಬಡತನವನ್ನು ಬೆನ್ನಿಗಂಟಿಸಿ ಕೊಂಡವರು. ಸಿರಿವಂತ, ಅನುಕೂಲಸ್ಥ ಕುಟುಂಬದ ಮಕ್ಕಳ ಬಣ್ಣದ ಲೋಕ ಈ

ಬಡ ಮಕ್ಕಳ ಬಾಳಿನಲ್ಲಿ ಬರೀ ಮರೀಚಿಕೆ. ಜೊತೆಗೆ ಹೆಣ್ಣುಮಕ್ಕಳೆಂಬ ತಾರತಮ್ಯಕ್ಕೊಳಗಾಗುವ ಈ ಹೆಣ್ಣು ಮಕ್ಕಳು ಮೂಲಭೂತವಾಗಿ ದೊರೆಯಬೇಕಾದ ಎಲ್ಲಾ ಸೌಲಭ್ಯ, ಹಕ್ಕುಬಾಧ್ಯತೆಗಳಿಂದ ವಂಚಿತರು.

ಗಂಗಾ ಗೌರಿ ಮ್ಯಾಚ್ ಇಂಡಸ್ಟ್ರೀಸಿನಲ್ಲಿ ದುಡಿಯುವ ಬಹುಪಾಲು ಕಾರ್ಮಿಕರು ಈ ಎಳೆಯ ಬಾಲಕಿಯರು. ಬೆಂಕಿ ಪೆಟ್ಟಿಗೆ ಸ್ಕೇಲ್ ಕಡ್ಡಿಗಳ ರಾಶಿಗಳ ನಡುವೆ ಕುಳಿತ ಈ ಬಾಲಕಿಯರ ದೃಷ್ಟಿ ಕೇವಲ ಕೆಲಸದ ಮೇಲೆ ಮಾತ್ರ. ನಿಮಿಷ ನಿಮಿಷವನ್ನೂ ಲೆಕ್ಕ ಹಾಕುವ ಅವರ ಎಳೆಯ ಕೈಗಳ ಚುರುಕುತನ ಯಂತ್ರಗಳಿಗಿಂತಲೂ ಅದ್ಭುತ. ಆದರೆ, ಇದು ಸೂಕ್ಷ್ಮತೆಯ ಮಾತಲ್ಲ. ಇಲ್ಲಿ ದುಡಿಯುವ ರೇಣುಕ, ವಿಜಯಲಕ್ಷ್ಮಿ–ಸ್ಟೆಲಾಮೇರಿ, ವಿಜಯೂರೂ ಖಾಯಂ ಉದ್ಯೋಗಿಗಳಲ್ಲ. ಪೀಸ್ ರೇಟಿನ ಆಧಾರದ ಮೇಲೆ ತಮ್ಮ ಬೆವರಿನ ದುಡಿಮೆಯ ಪ್ರತಿಫಲ ಪಡೆಯುವವರು.



ಎಸ್. ಎಸ್. ಎಲ್. ಸಿ. ಪಾಸಾಗಿದ್ದರೂ, ವಿದ್ಯಾಭ್ಯಾಸ ಮುಂದುವರಿಸಲಾಗದ ವಿಜಯಲಕ್ಷ್ಮಿ ಸ್ಕೇಲ್‌ನಿಂದ ಕಡ್ಡಿಗಳನ್ನು ತೆಗೆದು ಪೆಟ್ಟಿಗೆಗೆ ತುಂಬುತ್ತಾಳೆ. ಕಣ್ಣು ರೆಪ್ಪೆ ಅಲುಗಾಡಿಸುವುದರಲ್ಲಿ ಹಲವಾರು ಪೆಟ್ಟಿಗೆಗಳಿಗೆ ಕಡ್ಡಿಗಳನ್ನು ತುಂಬುವ ವಿಜಯಲಕ್ಷ್ಮಿ ಒಂದು ಗ್ರಾಸ್‌ಗೆ ಕೇವಲ ನಲವತ್ತೈದು ಪೈಸೆ ಪಡೆಯುತ್ತಾಳೆ. ಒಂದು ದಿನಕ್ಕೆ ಐದು ಅಥವಾ ಆರು ಗ್ರಾಸ್ ಮಾಡುತ್ತೇನೆಎನ್ನುವ ಚುರುಕುತನವನ್ನು ಲೆಕ್ಕ ಹಾಕಿ. ಬೆಳಿಗ್ಗೆ 9 ಗಂಟೆಗೆ ಕೆಲಸಕ್ಕೆ ಬರುವ ವಿಜಯಲಕ್ಷ್ಮಿ ಸಂಜೆ ಆರರ ವರೆಗೆ ದುಡಿಯುತ್ತಾಳೆ. ಅವಳು ಪಡೆಯುವ ಕೇವಲ 3. 75ಪೈಸೆ ರೂಗಳನ್ನು ತಾಯಿಗೊಪ್ಪಿಸಿ ಕುಟುಂಬದ ನೊಗದ ಭಾರಕ್ಕೆ ನೆರವಾಗುತ್ತಾಳೆ.

ಆರನೇ ತರಗತಿಯಲ್ಲಿ ಫೇಲಾದುದಕ್ಕೆ ಓದಿಗೆ ತಿಲಾಂಜಲಿ ನೀಡಿದ ರೇಣುಕ ಹನ್ನೆರಡು ವರ್ಷ ವಯಸ್ಸಿನ ಹುಡುಗಿ. ರಾಶಿರಾಶಿಯಾಗಿ ಬಿದ್ದ ಕಡ್ಡಿಗಳನ್ನು ತನ್ನ ಬಳಿ ಹಾಕಿಕೊಂಡು ಸ್ಕೇಲುಗಳಿಗೆ ಜೋಡಿಸುತ್ತಾಳೆ. ಒಂದು ಸ್ಕೇಲು ಜೋಡಿಸಿದರೆ ಕೇವಲ 25 ಪೈಸೆ ಪಡೆಯುವ ಈಕೆ ದಿನಕ್ಕೆ ಐದು ಅಥವಾ ಆರು ಸ್ಕೇಲ್ ಜೋಡಿಸುತ್ತಾಳೆ. ಮನೆಗ್ಹೋಗುವ ಮುನ್ನ ಅವಳು ಪಡೆಯುವುದು ಕೇವಲ 1.50 ಪೈಸೆ.

ದಿನಕ್ಕೆ ಎಂಟು ಗಂಟೆಗಳಿಗಿಂತಲೂ ಹೆಚ್ಚು ಹೊತ್ತು ದುಡಿಯುವ ಈ ಹೆಣ್ಣು ಮಕ್ಕಳು ಸಾಮಾನ್ಯವಾಗಿ ಬೆನ್ನುನೋವಿನಿಂದ ನರಳುತ್ತವೆ. ಹೊರಗೆ ದುಡಿಯುವುದರ ಜೊತೆಗೆ ಮನೆಗೆಲಸದ ಜವಾಬ್ದಾರಿಯನ್ನು ಹೊರುತ್ತವೆ. ತಮಿಳು ನಾಡಿನ ಶಿವಕಾಶಿಯಲ್ಲಿ ಸುಮಾರು 45,000 ಬಾಲಕಾರ್ಮಿಕರಿದ್ದು, ಗಂಡು ಮಕ್ಕಳಿಗಿಂತ ಹೆಚ್ಚು ಸಂಖ್ಯೆಯ ಹೆಣ್ಣು ಮಕ್ಕಳು ಇಲ್ಲಿ ದುಡಿಯುತ್ತಿದ್ದಾರೆ.

ಹಳ್ಳಿಗಳಲ್ಲಿ ವಾಸಿಸುವ ಕುಟುಂಬಗಳ ಹೆಣ್ಣು ಮಕ್ಕಳು ಸಾಮಾನ್ಯವಾಗಿ ಕೂಲಿನಾಲಿ ಮಾಡುತ್ತವೆ. ಮೆಣಸಿನ ಹಣ್ಣು ತರಿಯುವುದು, ಹತ್ತಿ ಬಿಡಿಸುವುದು, ಹಕ್ಕಿಪಕ್ಕಿಗಳನ್ನು ಕಾಯುವುದು (ಅದು ಸೀಜನ್‌ನಲ್ಲಿ ಮಾತ್ರ) ಮನೆಗೆಲಸ, ಮುಂತಾದವುಗಳನ್ನು ಮಾಡುತ್ತಾರೆ. ಬೆಳಗ್ಗೆಯಿಂದ ಸಂಜೆಯವರೆಗೆ ಕೆಲಸ ಮಾಡಿದರೂ 2ರಿಂದ 3ರೂಗಳನ್ನು ಮಾತ್ರ ಪಡೆಯುತ್ತಾರೆ. ಅಡಿಕೆಗೆ ಪ್ರಖ್ಯಾತವಾದ ಮಲೆನಾಡಿನಲ್ಲಿ ಅಡಿಕೆ ಸುಲಿಯುವ ಕೆಲಸ ಸಾಂಪ್ರದಾಯಿಕವಾಗಿ ಸ್ತ್ರೀಯರಿಗೆ ಸೀಮಿತವಾದದ್ದು. ಅಡಿಕೆ ಸುಲಿಯುವ ಮಹಿಳೆಯರಲ್ಲಿ ಅರ್ಧದಷ್ಟು ಕೆಲಸಗಾರರು ಎಳೆಯ ಬಾಲಕಿಯರು ಸುನಂದಾ, ಸುಜಾತ, ಗಿರಿಜ, ಗೀತ ಅಡಿಕೆ ಸುಲಿಯುವುದರಲ್ಲಿ ನುರಿತ ಕೈಗಳು. ಗಂಡಸರು ಯಾಕೆ ಅಡಿಕೆ ಸುಲಿಯುವುದಿಲ್ಲವೆಂದು ಕೇಳಿದರೆ, 'ಅವರೂ ಅಡಿಕೆ ಸುಲಿಯಲು ಪ್ರಾರಂಭಿಸಿದರೆ ನಮಗೆ ಕೆಲಸ ಎಲ್ಲಿ ಸಿಗುತ್ತೆ' ಎಂದು ಮರು ಪ್ರಶ್ನೆ ಎಸೆಯುತ್ತಾರೆ. ಗೋಡೆಗೆ ಒರಗಿಕೊಂಡು, ಅಡಿಕೆ ಸುಲಿಯಲೆಂದೇ ಇರುವ ಕುಡುಗೋಲನ್ನು ಮುಂಡಿಗೆ ಸಿಗಿಸಿಕೊಂಡು ಚರ

ಚರ ಎಂದು ಸಿಪ್ಪೆ ಸುಲಿದು ಬುಟ್ಟಿಯನ್ನು ತುಂಬುತ್ತಾರೆ. ಶಾಲೆಯ ಮೆಟ್ಟಿಲನ್ನೇರದ ಬಹುಪಾಲು ಮಕ್ಕಳು ಬೆಳಿಗ್ಗೆ ಮನೆಗೆಲಸ ಮಾಡಿಕೊಂಡು, ಬುತ್ತಿಗಂಟು ಹೊತ್ತು 4 ಅಥವಾ 5 ಮೈಲಿ ದೂರದ ಹಳ್ಳಿ ಅಥವಾ ಊರುಗಳಿಗೆ ನಡೆದು ಬರುವ ಈ ಮಕ್ಕಳು ಒಂದು ದಿನಕ್ಕೆ ನಾಲ್ಕು ಅಥವಾ ಐದು ಗಿದ್ನ ಅಡಿಕೆ ಸುಲಿಯುತ್ತಾರೆ. ಒಂದು ಗಿದ್ನಕ್ಕೆ ಕೇವಲ 25 ಪೈಸೆ. ಸುಮಾರು ಐದು ಆರು ವರ್ಷಕ್ಕೆ ಅಡಿಕೆ ಸುಲಿಯಲು ಪ್ರಾರಂಭಿಸುವ ಈ ಮಕ್ಕಳು ಕಷ್ಟಪಟ್ಟು ಸೀಜನ್‌ನಲ್ಲಿ 200 ರಿಂದ 300 ರವರೆಗೆ ಸಂಪಾದಿಸುತ್ತಾರೆ. ಹಣ ಕೈಗೆ ದೊರೆತಕೊಡಲೇ ತಂದೆ–ತಾಯಿಗೊಪ್ಪಿಸುವ ಈ ಮಕ್ಕಳು, ತಮಗೆ ಬೇಕಾದಾಗ ಕೇಳಿ ಪಡೆಯುತ್ತವೆ. ಬೆಳಿಗ್ಗೆ 9 ಗಂಟೆ ಯಿಂದ ಅವಿಶ್ರಾಂತವಾಗಿ ದುಡಿಯುವ ಈ ಹೆಣ್ಣು ಮಕ್ಕಳು ಅಂಗೈ ಉರಿ, ಬೆನ್ನು, ಭುಜ ನೋವಿನಿಂದ ಸದಾ ನರಳುತ್ತವೆ.

ಮನೆಗೆಲಸಕ್ಕಾಗಿ ಎಳೆಯ ಬಾಲಕಿಯನ್ನು ನೇಮಕ ಮಾಡಿಕೊಳ್ಳುವ ಪದ್ಧತಿಗಿಂತ ಭಿನ್ನವಾದ, ಆದರೆ ಅಮಾನುಷವಾದ ಪದ್ಧತಿಯು ನಮ್ಮ ಸಮಾಜದಲ್ಲಿ ಬಳಕೆಯಲ್ಲಿದೆ. ನಗರದ ಹಾಗೂ ಹಳ್ಳಿಗಳಲ್ಲಿ ಶ್ರೀಮಂತ ಮತ್ತು ಸ್ಥಿತಿವಂತ ಕುಟುಂಬಗಳ ಸ್ತ್ರೀಯರು ಸಣ್ಣ ಪುಟ್ಟದೆನ್ನಲಾದ ಕೆಲಸಗಳಿಗೆ ನೆರವಾಗಲು ಎಳೆಯ ಬಾಲಕಿಯನ್ನು ಇತರ ಕುಟುಂಬಗಳಿಂದ ತಂದು ಸಾಕ್ತಾರೆ. ಇದು ಜೀತಪದ್ಧತಿಯ ಇನ್ನೊಂದು ಸ್ವರೂಪ. ಬಡತನದ ಬವಣೆಯಿಂದ ಜರ್ಜರಿತವಾದ ಕುಟುಂಬಗಳಿಂದ, ಒಂದೇ ಜಾತಿಯ ಕೆಲವೊಮ್ಮೆ ಸಂಬಂಧಿಕರ ಕುಟುಂಬಗಳಿಂದ ಕರೆತರಲಾಗುತ್ತದೆ. ಒಂದು ಬಾಯಿಯ ಖರ್ಚುಳಿದರೆ ಇನ್ನೊಂದು ಮಗುವಿ ಗಾದೀತೆಂದು ತಂದೆ ತಾಯಿಗಳು ತಮ್ಮ ಎಳೆಯ ಕಂದಮ್ಮಗಳನ್ನು ಒಲ್ಲದ ಮನಸ್ಸಿನಿಂದಲೇ ಕಳಿಸುತ್ತಾರೆ. ಐದು ಅಥವಾ ಆರು ವರ್ಷದ ಬಾಲೆಯರಿಂದ ಹಿಡಿದು 20ವರ್ಷ ವಯಸ್ಸಿನ ಹುಡುಗಿಯರನ್ನು ದೂರದೂರು ಗಳಿಂದ ಕರೆತಂದು ಮನೆಗೆಲಸಕ್ಕಾಗಿ ಮನೆಯಲ್ಲಿಯೇ "ಸಾಕಲಾಗುತ್ತದೆ." ತಂದೆ ತಾಯಿ, ಒಡಹುಟ್ಟಿದ್ದರಿಂದ ದೂರವಿರುವ ಈ ಮಕ್ಕಳು ನಿಟ್ಟುಸಿರು ಗೆರೆಯುತ್ತಾ ದಿನ ನೂಕುತ್ತವೆ.

ಬೆಳಕು ಕತ್ತಲ ಮಂಪರ ತೆಕ್ಕೆಯಿಂದ ಬಿಡಿಸಿ ಕೊಳ್ಳುವ ಮೊದಲೇ ಕೆಲಸಗಳ ಹೊರೆಯನ್ನು ಹೊತ್ತು



ಕೊಂಡೇ ಈ ಬಾಲೆಯರು ಹಾಸಿಗೆಯಿಂದೇಳುತ್ತಾರೆ. ಕಸ ಹೊಡೆಯುವುದು, ನೆಲ ಒರೆಸುವುದು, ಊಟಕ್ಕೆ ಬಡಿಸುವುದು, ತರಕಾರಿ ಹೆಚ್ಚುವುದು, ಮಕ್ಕಳನ್ನಾಡಿಸು ವುದು, ಮಕ್ಕಳನ್ನು ಸ್ಕೂಲಿಗೆ ಕರೆದೊಯ್ಯುವುದು ಇತ್ಯಾದಿ ಸಣ್ಣ ಪುಟ್ಟವೆಂದು ಹೇಳಲಾದ ಕೆಲಸಗಳನ್ನು ದಿನವಿಡೀ ಮಾಡುತ್ತಲೇ ಇರುತ್ತಾರೆ. ಹಬ್ಬ ಹರಿದಿನ, ಮನೆಯಲ್ಲಿ ಹೆರಿಗೆ, ಬಾಣಂತನ, ಇತರ ಸಮಾರಂಭ ಗಳಲ್ಲಿ ಈ ಮಕ್ಕಳ ಸ್ಥಿತಿಯಂತೂ ಉಸಿರು ಗಟ್ಟಿಸು ವಂತಹದು. ಈ ಮಕ್ಕಳ ಗಾಣದೆತ್ತಿನ ದುಡಿತಕ್ಕೆ ಸಿಕ್ಕುವ ಪ್ರತಿಫಲವೆಂದರೆ ಎರಡು ಹೊತ್ತಿನ ಊಟ, ಬಟ್ಟೆ ಬರೆ ಮಾತ್ರ. ನಿರ್ದಿಷ್ಟ ವೇತನದ ವ್ಯಾಖ್ಯಾನದ ಪರಿಧಿಯೊಳಗೆ ಬರದ ಇವರ ದುಡಿಮೆಯ ಮೌಲ್ಯ ಮಾಪನ ಅಸಾಧ್ಯದ ಮಾತು.

ಮನೆಯವರು ನೋಡಿಕೊಳ್ಳುವ ಅಮಾನುಷ ವಿಧಾನದಿಂದ ಈ ಶಾಪಗ್ರಸ್ತ ಎಳೆಯ ಬಾಲಕಿಯರ ಮನಸ್ಸುಗಳು ಘಾಸಿಗೊಳ್ಳುತ್ತವೆ. ಸಿರಿವಂತ ಕುಟುಂಬ ವೊಂದರಲ್ಲಿ ಎರಡುವರ್ಷಗಳಿಂದ ನೆಲೆಸಿರುವ ರತ್ನಾ 11 ವಯಸ್ಸಿನ ಹುಡುಗಿ. ಮುಂಜಾನೆಯಿಂದ, ರಾತ್ರಿ ಹನ್ನೊಂದರವರೆಗೆ ಯಂತ್ರದಂತೆ ದುಡಿದರೂ, ಯಜ ಮಾನಿಯ ಕೆಂಗಣ್ಣ ನೋಟ, ಕುಹಕದ, ನಿಂದನೆಯ ಮಾತುಗಳು ಅವಳ ಪುಟ್ಟ ಹೃದಯವನ್ನು ಇರಿಯು ತ್ತವೆ. ಉದ್ದ ಹೆಚ್ಚುವ ಮೆಣಸಿನ ಕಾಯಿಯನ್ನು ಅಡ್ಡಡ್ಡ ಹೆಚ್ಚಿದರೆ, ಎರಡು ಈರುಳ್ಳಿಯ ಬದಲು ಮೂರು ಹೆಚ್ಚಿದರೆ, ಪಾತ್ರೆಗಳನ್ನು ತೊಳೆಯುವಾಗ ಸದ್ದಾದರೆ ಛಾಟಿ ಏಟಿನಂತಹ ಮಾತುಗಳು ರತ್ನಾಳ ಮೃದುವಾದ ಮನಸ್ಸಿನ ಮೇಲೆ ಬರೆ ಎಳೆಯುತ್ತವೆ.

ಹೀಗೆ ಕರೆತಂದ ಮಕ್ಕಳನ್ನೇ ಸ್ವಂತ ಮಕ್ಕಳಂತೆ, ಅಕ್ಕರೆಯಿಂದ ನೋಡಿಕೊಳ್ಳುವ ಬೆಳೆಣಿಕೆಯ ಕುಟುಂಬಗಳೂ ಇವೆ. ಮನೆಗೆಲಸಕ್ಕಾಗಿ ತಂದ ಹೆಣ್ಣು ಮಕ್ಕಳನ್ನು ತಮ್ಮ ಮಕ್ಕಳಂತೆ, ಅವರ ದುಡಿತಕ್ಕೆ ಫಲವಾಗಿ, ಗಂಡು ಹುಡುಕಿ ಖರ್ಚು ವೆಚ್ಚವನ್ನು ವಹಿಸಿಕೊಂಡು ಮದುವೆ ಮಾಡುವ ಕುಟುಂಬಗಳೂ ಇವೆ.

ಈ ಹೆಣ್ಣು ಮಕ್ಕಳು ಎದುರಿಸುವ ಇನ್ನೊಂದು ಸಮಸ್ಯೆಯೆಂದರೆ ಲೈಂಗಿಕ ಹಿಂಸೆ ಅತ್ಯಾಚಾರದ ಭಯ. ಕುಟುಂಬದಲ್ಲಿನ ಪುರುಷರು, ಗಂಡುಮಕ್ಕಳು, ನೆರೆಮನೆಯವರು ಇಂತಹ ಅಮಾಯಕ ಬಾಲಕಿಯರ ಮೇಲೆ ಅತ್ಯಾಚಾರವೆಸಗಿದ ನಿದರ್ಶನಗಳು ಸಾಕಷ್ಟಿವೆ. ಅತ್ತ ವಾಸಿಸುವ ಮನೆಯವರೊಂದಿಗೆ ಬಾಯಿ ಬಿಡಲಾಗದೇ ಇತ್ತ ತಂದೆ-ತಾಯಿಗಳೊಂದಿಗೂ ಹಂಚಿಕೊಳ್ಳಲಾಗದೇ ತ್ರಿಶಂಕು ಸ್ಥಿತಿ ಈ ಹಸುಳೆಗಳನ್ನು ಬಲಿತೆಗೆದುಕೊಳ್ಳುತ್ತದೆ.

ನಗರ ಪ್ರದೇಶಗಳಲ್ಲಿನ ಮಧ್ಯಮವರ್ಗ, ಹಾಗೂ ಶ್ರೀಮಂತ-ವರ್ಗಗಳ ಕುಟುಂಬಗಳು ಇಂದು ಮನೆಗೆಲಸ ಮಾಡುವ ಮಹಿಳೆಯರನ್ನು ನೆಚ್ಚಿಕೊಂಡಿವೆ. ನಗರ ಪ್ರದೇಶಗಳಲ್ಲಿ ಮನೆಗೆಲಸ ಮಾಡುವ ಮಹಿಳೆಯರಿಗೆ ಬೇಡಿಕೆಯಿದ್ದರೂ, ಅವರು ಪಡೆಯುವ ಸೌಲಭ್ಯ, ಸೌಕರ್ಯಗಳು ಮಾತ್ರ ನಗಣ್ಯ, ಮನೆಗೆಲಸ ಮಾಡಲು ನಂಬಿಕೆಗರ್ಹವಾದ ಹೆಂಗಸರನ್ನು ಅಥವಾ ಹೆಣ್ಣು ಮಕ್ಕಳನ್ನು ಮಧ್ಯಮ ವರ್ಗದ ಗೃಹಣಿಯರು ತಲಾಶ್ ಮಾಡುತ್ತಲೇ ಇರುತ್ತಾರೆ.



ಮನೆಗೆಲಸ ಮಾಡುವ ಸಂಪೂರ್ಣ ಜವಾಬ್ದಾರಿಯನ್ನು ತಾಯಿಯೋ ಅಥವಾ ಅಕ್ಕನೋ ಮಾಡುತ್ತಿದ್ದರೆ ಬಹಳಷ್ಟು ಹೆಣ್ಣು ಮಕ್ಕಳು ಅವರಿಗೆ ನೆರವಾಗುತ್ತವೆ. ಸಾಮಾನ್ಯವಾಗಿ 10 ಅಥವಾ 20 ರೂಗಳಿಂದ, 50 ಅಥವಾ 60 ರೂಗಳನ್ನು ಈ ಮಕ್ಕಳು ಪಡೆಯುತ್ತವೆ.

ಅನಕ್ಷರಸ್ಥ ಹೆಣ್ಣು ಮಕ್ಕಳು, ಐದು ಆರು ತರಗತಿಯವರೆಗೆ, ಕೆಲವೊಮ್ಮೆ S.S.L.Cಯ ವರೆಗೆ ಓದಿದ ಹೆಣ್ಣು ಮಕ್ಕಳು ಮನೆಗೆಲಸ ಮಾಡುತ್ತವೆ. ಮುಂಜಾನೆಯಿಂದ ಸಂಜೆಯವರೆಗೆ ದುಡಿದು ಮಲಗಿರುವ ಅಪ್ಪ, ನಿಟ್ಟುಸಿರು ಬಿಡುತ್ತಾ, ಮನೆಯಲ್ಲಿ ಇಡ್ಲಿ ಮಾಡಿ ಮಾರಿ ಸಂಸಾರ ಸಾಗಿಸುವ ತಾಯಿ. ತನಗಿಂತ ಸಣ್ಣ ಮಕ್ಕಳು, ಜಸಂತಳನ್ನು ಏಳನೆಯ ತರಗತಿಯಲ್ಲಿ ಓದುತ್ತಿರುವಾಗಲೇ ಮನೆಗೆಲಸಕ್ಕೆ ದೂಡಿತು. ಇಂದು ಎಸ್. ಎಸ್. ಎಲ್. ಸಿ. ಓದುತ್ತಿರುವ ಅವರ ತಂಗಿ ಗ್ರೇಸಿ ಮನೆಕೆಲಸ ಮಾಡುತ್ತಾಳೆ. ಓದುವುದರ ಜೊತೆಯಲ್ಲಿಯೇ ಬೇರೆ ಮನೆಗಳಲ್ಲಿ ಪಾತ್ರೆ ತೊಳೆಯುವುದು, ಕಸ ಹೊಡೆಯುವುದು, ನೀರು ತರುವುದು, ಬಟ್ಟೆ ಒಗೆಯುವುದು ಜೊತೆಯಲ್ಲಿ ಮನೆಯಲ್ಲಿಯೂ ಇವೇ ಕೆಲಸ ಮಾಡಬೇಕಾಗುತ್ತದೆ.

ನಿರ್ದಿಷ್ಟ ಸಮಯ, ನಿರ್ದಿಷ್ಟ ವೇತನವಿಲ್ಲದ ಈ ಮಕ್ಕಳು, ಮನೆಗೆಲಸ ಮಾಡುವ ಸ್ತ್ರೀಯರು, ಕೆಲವೊಮ್ಮೆ ಸುಳ್ಳು ಕಳ್ಳತನದ ಆರೋಪ, ಅತ್ಯಾಚಾರ ಮುಂತಾದ ಕಿರುಕುಳಗಳಿಗೆ ಒಳಗಾಗುತ್ತಾರೆ.

ಇಂದು ಸಮಾಜವು ಬದಲಾಗುತ್ತಿವೆ. ಬದಲಾವಣೆಯ ಹೊಸಗಾಳಿ ಮಹಿಳೆಯ ಜೀವನದಲ್ಲಿ ಹಲವಾರು ಬದಲಾವಣೆಗೆ ಎಡೆಮಾಡಿಕೊಟ್ಟಿದೆ. ನಾಳೆ ಪರರ ಮನೆಗೆ ಹೋಗುವ ಹೆಣ್ಣಿಗೇಕೆ ವಿದ್ಯೆ ಎಂಬ ಧೋರಣೆ ನಿಧಾನವಾಗಿ ಬದಲಾಗಿ, ಕಾಗದ ಪತ್ರಗಳನ್ನು ಓದಲು, ಸಹಿಮಾಡಲಾದರೂ ನಾಲ್ಕು ಅಕ್ಷರ ಬರಲಿ ಎಂಬ ನಂಬಿಕೆ ತಂದೆ-ತಾಯಿಯರಲ್ಲಿ ಚಿಗುರೊಡೆಯುತ್ತಿವೆ. ಜೊತೆಗೆ ಆರ್ಥಿಕ ಮುಗ್ಗಟ್ಟು ನಗರ ಪ್ರದೇಶ ಮಧ್ಯಮವರ್ಗದ ಹೆಣ್ಣುಮಕ್ಕಳ ವಿದ್ಯಾಭ್ಯಾಸದ ಆಸೆಗೆ ನೀರೆರೆಯುತ್ತಿದೆಯಾದರೂ ಶತಮಾನದ ಸ್ವೀಕೃತ,

ಮೌಲ್ಯಗಳ ನಡುವೆಯೇ ಈ ಬದಲಾವಣೆಯ ಮಾತುಗಳು ಚಾಲನೆಯಲ್ಲಿವೆ.

ಹೆಣ್ಣು ಮಗುವೊಂದು ತನ್ನ ಮಾನಸಿಕ ದಿಗಂತವನ್ನು ವಿಸ್ತರಿಸುವುದರ ಜೊತೆಜೊತೆಯೇ ತಾನು ನಿರ್ವಹಿಸಬೇಕಾದ ಪೂರ್ವ ನಿಯೋಜಿತ ಪಾತ್ರವೊಂದನ್ನು ಮೈಗೂಡಿಸಿಕೊಳ್ಳತೊಡಗುತ್ತದೆ. ಮೂರು ನಾಲ್ಕು ವರ್ಷದ ಹೆಣ್ಣು ಮಕ್ಕಳನ್ನು ಮನೆಗೆಲಸಕ್ಕೆ ತೊಡರಿಸಲಾಗುತ್ತದೆ. ನಾಲ್ಕು ವರ್ಷದ ಸ್ಮಿತಾ ಮನೆಯವರಿಗೆಲ್ಲಾ ಊಟ, ತಿಂಡಿ ಬಡಿಸಲು ಮುಂದಾಗುವುದು, ಎಲ್ಲರ ಉಪಹಾರವಾದ ನಂತರ ತಾನು ತಿನ್ನುವುದು ಮುಂತಾದ ಸಂಗತಿಗಳು ಮನೆಯವರಿಗೆ ನಗುತರಿಸುವ, ತಮಾಷೆ ಮಾಡುವ, ಮುದ್ದು ಮಾಡುವ ಸಂಗತಿಗಳಾಗುವುದರ ಜೊತೆಯಲ್ಲಿ ಭಾವೀ ಜೀವನದ ಸಿದ್ಧಪಡಿಸಿದ ಪಾತ್ರಕ್ಕೆ ಅಣಿಯಾಗುವಂತೆ ಹಿರಿಯರು ಪ್ರೋತ್ಸಾಹಿಸುವ ತರಬೇತಿಯೂ ಆಗಿರುತ್ತದೆ.

ಪ್ರಾಥಮಿಕ ಶಾಲೆಯಿಂದ–ಹೈಸ್ಕೂಲಿನವರೆಗೂ ಓದುತ್ತಿರುವ, ಹಳ್ಳಿಗಾಡಿನಲ್ಲಿ ವಾಸಿಸುವ ಮಧ್ಯಮ ವರ್ಗದ, ಕೆಳವರ್ಗದಿಂದ ಬರುವ ಬಹುಪಾಲು ಹೆಣ್ಣು ಮಕ್ಕಳು ಮನೆಗೆಲಸದ ಜವಾಬ್ದಾರಿಯೊಂದಿಗೆ ವಿದ್ಯಾಭ್ಯಾಸಮಾಡಬೇಕಾಗುತ್ತದೆ. ಚಿಕ್ಕ ಪುಟ್ಟ ಕೆಲಸಗಳ ಜೊತೆಯಲ್ಲಿ ಮನೆಯನ್ನು ಸಂಪೂರ್ಣವಾಗಿ ನೋಡಿಕೊಳ್ಳುವ ಜವಾಬ್ದಾರಿ ಈ ಮಕ್ಕಳದಾಗಿರುತ್ತದೆ.

ತಾಯಿಯ ಅನಾರೋಗ್ಯ, ನಿರ್ಲಕ್ಷಕೊಳಗಾಗುವ, ಎಳೆಯಮಕ್ಕಳು ಹೆಚ್ಚು ಇರುವ, ಮನೆಯ ಹಿರಿಯ ಹೆಣ್ಣು ಮಕ್ಕಳು, ತಂದೆತಾಯಿ ಇಬ್ಬರೂ ದುಡಿಯುತ್ತಿರುವ ಕುಟುಂಬಗಳಲ್ಲಿನ ಬಾಲಕಿಯರ ಸ್ಥಿತಿ ಶೋಚನೀಯ. ಮನೆಕೆಲಸದ ಒತ್ತಡದಿಂದಾಗಿಯೇ ಇಂತಹ ಬಾಲಕಿಯರ ವಿದ್ಯಾಭ್ಯಾಸ ಕುಂಠಿತವಾಗುತ್ತದೆ. ಕ್ರಮೇಣ ಅವರ ವಿದ್ಯಾಭ್ಯಾಸಕ್ಕೆ ವಿದಾಯ ಹೇಳಲಾಗುತ್ತದೆ. ಬೆಳಗ್ಗೆ ಶಾಲೆಗೆ ಹೊರಡುವವರೆಗೂ ಗಾಣದೆತ್ತಿನ ಹಾಗೆ ದುಡಿಯುವ ಈ ಮಕ್ಕಳು ರಾತ್ರಿ ಹನ್ನೊಂದರ ನಂತರ ಓದಲು, ನೋಟ್ಸ್ ಬರೆಯಲು ತೂಕಡಿಸುತ್ತಾ ಕುಳಿತುಕೊಳ್ಳುವ ದೃಶ್ಯ ಮನಕಲಕುವಂತಹದು.

ಕಿತ್ತು ತಿನ್ನುವ ಬಡತನದ ಕುಟುಂಬಗಳಲ್ಲಿ ಬೆಳೆಯುವ ಹೆಣ್ಣು ಮಕ್ಕಳ ಗತಿಸ್ಥಿತಿಯನ್ನು ವಿವರಿಸಲಾಗುವುದಿಲ್ಲ. ಓದುವ ಅಭಿಲಾಶೆಯನ್ನು ಹತ್ತಿಕ್ಕಲಾರದ ಈ ಎಳೆಯ ಬಾಲಕಿಯರು ಬಿಡುವಿನ ವೇಳೆಯಲ್ಲಿ ಹೊರಗೆ ದುಡಿದು ಶಾಲೆಗೆ ಹೋಗುತ್ತಾರೆ. ಬೇರೆಯವರ ಮನೆಗೆಲಸ ಮಾಡುವುದು, ರಜದಿನಗಳಲ್ಲಿ ಕೂಲಿಕೆಲಸ ಮಾಡುವುದು, ಅಡಿಕೆ ಸುಲಿಯುವುದು, ತಂದೆ ತಾಯಿಯರು ಮಾಡುವ ಕೆಲಸಗಳಿಗೆ ನೆರವಾಗುವುದು, ಬೀಡಿಕಟ್ಟುವುದು, ಅಗರ ಬತ್ತಿ ಮೊಡುವುದು, ಬೆಂಕಿಕಡ್ಡಿಗಳನ್ನು ಸ್ಕೇಲ್‌ಗೆ ಜೋಡಿಸುವುದು ಮುಂತಾದ ಕೆಲಸಗಳನ್ನು ಮಾಡುತ್ತಲೇ ಓದು ಮುಂದುವರಿಸುತ್ತಾರೆ.



ಈ ಜವಾಬ್ದಾರಿಗಳು ಈ ಹಸುಳೆಗಳಲ್ಲಿ ಅಡಗಿರುವ ಸುಪ್ತ ಪ್ರತಿಭೆಗಳನ್ನು ಎಳೆತನದಲ್ಲೇ ಚಿವುಟಿ ಹಾಕುತ್ತವೆ. ವಿದ್ಯಾಭ್ಯಾಸದಲ್ಲಿ ಹಿಂದುಳಿಯುವುದು ಪತ್ಯೇತರ ಚಟುವಟಿಕೆಗಳಿಂದ ವಂಚಿತರಾಗುವ, ಯಾವುದೇ ಮಹತ್ವಾಕಾಂಕ್ಷೆಗಳನ್ನು ಬೆಳಸದ ವಾತಾವರಣದಲ್ಲಿ ಈ ಬಾಲಕಿಯರ ವ್ಯಕ್ತಿತ್ವ ಪೂರ್ಣ ವಿಕಸನ ಹೊಂದುವುದು ಅಸಾಧ್ಯದ ಮಾತು.

ವಿವಿಧ ಕಡೆಗಳಲ್ಲಿ ದುಡಿಯುತ್ತಿರುವ ನಿರ್ಲಕ್ಷಕೊಳಗಾದ ಬಾಲ ಕಾರ್ಮಿಕರ ಹಿತಾಸಕ್ತಿಯ, ಹಕ್ಕು ಬಾಧ್ಯತೆಗಳ ರಕ್ಷಣೆಗಾಗಿ ಇಂದು ಕರ್ನಾಟಕದಲ್ಲಿ ಹಲವಾರು ಕಾನೂನುಗಳು ಅಸ್ಥಿತ್ವದಲ್ಲಿವೆ. ಅಗರ ಬತ್ತಿ, ಬೀಡಿ ಕಾರ್ಖಾನೆಗಳ ಸಂಬಂಧ ಪಟ್ಟಹಾಗೆ, ಮಕ್ಕಳ ಉದ್ಯೋಗ, ಮುಂತಾದವುಗಳಿಗೆ ಪ್ರತ್ಯೇಕ ಕಾನೂನುಗಳಿವೆ. ಇತ್ತೀಚೆಗೆ ಕೇಂದ್ರ ಸರ್ಕಾರ ಬಿಗಿ



ಕಾನೂನೊಂದನ್ನು ಅನುಷ್ಠಾನಕ್ಕೆ ತಂದಿರುವುದರ ಮೂಲಕ ಈ ಮಕ್ಕಳಿಗೆ ಕನಿಷ್ಠ ವೇತನ, ರಜಾಸೌಲಭ್ಯ ಬಾಲಕಾರ್ಮಿಕರನ್ನು ಕಾನೂನು ವ್ಯಾಪ್ತಿಗೆ ಸೇರಿಸುವ ಹಲವಾರು ಸೌಲಭ್ಯಗಳನ್ನು ಒದಗಿಸಿ ಕೊಟ್ಟಿದೆ.

ಆದರೆ ಈ ಕಾನೂನುಗಳು ಕೇವಲ ಕಾನೂನು ಗಳಾಗಿ ಉಳಿದು ಬಿಡುವುದರ ಜೊತೆಯಲ್ಲಿ ಬಿಡಿ ಬಿಡಿ ಯಾಗಿ ಹಂಚಿ ಹೋದಂತೆ ಕಾಣುವ ದುಡಿಯುವ ಬಾಲಕಿಯರ ಯೋಗಕ್ಷೇಮವನ್ನು ಎಷ್ಟರ ಮಟ್ಟಿಗೆ ಕಾಪಾಡುತ್ತವೆ ? ಇಂತಹ ಕಾನೂನುಗಳನ್ನು ರೂಪಿಸು ವಾಗ, ಸಮಾಜದಲ್ಲಿ ತಾರತಮ್ಯಕ್ಕೊಳಗಾದ ಸ್ತ್ರೀಯರ ಸ್ಥಾನಮಾನವನ್ನು ಗಮನಿಸಿ ರೂಪಿಸಲಾಗುತ್ತದೆಯೆ ? ದುಡಿಯುವ ಈ ಹೆಣ್ಣು ಮಕ್ಕಳ ದ್ವಿತೀಯ ದರ್ಜೆಯ ಸ್ಥಾನ, ಅವರು ಹೊರುವ ಮನೆಗೆಲಸದ ಜವಾಬ್ದಾರಿ ಯನ್ನು ಗುರುತಿಸಲಾಗುತ್ತದೆಯೆ ? ಬಹುಪಾಲು ಬಾಲಕಿಯರು ಮಾಡುವ ಕೆಲಸಗಳು ಮನೆಗೆಲಸದ ಸ್ವರೂಪವನ್ನು ಹೊಂದಿರುವಂತಹವು. ಅಗೋಚರ ವಾದ ಉತ್ಪಾದನೆಯ ವ್ಯಾಪ್ತಿಗೆ ಸೇರಿದ ಇಂತಹ ಕೆಲಸ ಗಳನ್ನು ಮಾಡುವ ಈ ಬಾಲಕಿಯರು ಅಗೋಚರ ವಾಗಿಯೇ ಉಳಿದು ಬಿಡುತ್ತಾರೆ.

ನಮ್ಮ ಸಮಾಜದಲ್ಲಿ ಸ್ತ್ರೀಯರ ಬಗ್ಗೆ ಚಾಲ್ತಿ ಯಲ್ಲಿರುವ ಧೋರಣೆಗಳು, ಪರಂಪರಾಗತವಾಗಿ ನಡೆದು ಬಂದ ನಂಬಿಕೆಗಳು ಈ ಎಳೆಯ ಬಾಲಕಿಯರ ಕತ್ತಲ ಭವಿಷ್ಯವನ್ನು ರೂಪಿಸುವುದರಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ. ಇತ್ತ ತಾನು ಮುಂದೆ ನಿರ್ವಹಿಸ ಬೇಕಾದ ಜವಾಬ್ದಾರಿಗಳನ್ನು ಎಳೆತನದಲ್ಲಿಯೇ ರೂಢಿಸಿ ಕೊಳ್ಳುವಂತೆ ಮಾಡುವ ಸಮಾಜ ಆ ಪುಟ್ಟ ಹೆಗಲುಗಳ ಮೇಲೆ ಹೊರಲಾರದ ಹೊರೆಯನ್ನು ಹೊರಿಸುತ್ತದೆ. ಮೂಲಭೂತವಾಗಿ ಕುಟುಂಬಗಳ ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸದೆಯೇ ಈ ಮಕ್ಕಳ ಅಭಿವೃದ್ಧಿಯು ಸಾಧ್ಯವಾಗುವುದಿಲ್ಲ. ಬಡತನ, ನಿರುದ್ಯೋಗ ದಿಂದಾಗಿ ಈ ಮಕ್ಕಳು ದುಡಿದು ತರುವ ಉಪಆದಾಯ ವನ್ನು (Supplementary Income) ಕುಟುಂಬಗಳು ನೆಚ್ಚಬೇಕಾಗುತ್ತದೆ. ರಾಜ್ಯ ಸರ್ಕಾರವು ಮಹಿಳೆ ಮತ್ತು ಮಕ್ಕಳ ಕಲ್ಯಾಣಕ್ಕಾಗಿ ಹಲವಾರು ತೇಪೆ ಹಾಕುವ ಯೋಜನೆಗಳನ್ನು ಹಾಕಿಕೊಂಡಿದ್ದರೂ ಸಮಾಜದ ಕೆಳಸ್ತರದ ಜನರನ್ನು ಅವು ತಲುಪುತ್ತಿಲ್ಲ. ಭಾರತಕ್ಕೆ ಸ್ವಾತಂತ್ರ್ಯ ಬಂದು 28 ವರ್ಷಗಳ ನಂತರ ಮಕ್ಕಳ ಅಭಿವೃದ್ಧಿಗಾಗಿ ಕೇಂದ್ರ ಸರ್ಕಾರ ಸಮಗ್ರ ಬಾಲ ಅಭಿವೃದ್ಧಿ ಯೋಜನೆ(Integrated Child Development service) ಕಾರ್ಯಕ್ರಮವನ್ನು ರೂಪಿಸಿತು. ಆದರೆ ಇದು ಅಸ್ತಿತ್ವಕ್ಕೆ ಬಂದು 11 ವರ್ಷಗಳಾದರೂ ನಮ್ಮ ದೇಶದ ಮಕ್ಕಳ ಸಂಖ್ಯೆಯ ಸರಾಸರಿ 25ರಷ್ಟು ಮಕ್ಕಳನ್ನು ತಲುಪುತ್ತಿಲ್ಲ.

1979 ಅಂತರಾಷ್ಟ್ರೀಯ ಮಕ್ಕಳ ವರ್ಷವನ್ನಾಗಿ ಆಚರಿಸಲಾಯಿತು. ವಿಶ್ವಸಂಸ್ಥೆ,ಯೂನಿಸೆಫ್,ಯುನೆಸ್ಕೊ ಮುಂತಾದ ಹಲವಾರು ಅಂತರರಾಷ್ಟ್ರೀಯ ಸಂಸ್ಥೆಗಳು ಮಕ್ಕಳ ಅಭಿವೃದ್ಧಿಗಾಗಿ ವಿಶ್ವದಾದ್ಯಂತ ಹಲವಾರು ಯೋಜನೆಗಳನ್ನು ರೂಪಿಸಿಕೊಂಡಿವೆ. ಇಂತಹ ಯೋಜನೆಗೆ ಕೇವಲ ತಾತ್ಕಾಲಿಕ ಪರಿಹಾರ ದೃಷ್ಟಿ ಕೋನವನ್ನು ಮಾತ್ರ ಹೊಂದಿವೆ. ಸಾರ್ಕ್ ಸಮ್ಮೇಳನ ದಲ್ಲಿ ಮಕ್ಕಳ ಸಮಸ್ಯೆಗಳ ಬಗ್ಗೆ-ಕೇಂದ್ರ ಸಚಿವೆ ಮಾರ್ಗ ರೇಟ್ ಆಳ್ವ ಅವರ ಅಧ್ಯಕ್ಷತೆಯಲ್ಲಿ ಮೂರುದಿನದ ಸಭೆಯೊಂದನ್ನು ನಡೆಸಲಾಯಿತು. 1/3 ರಷ್ಟು ಮಕ್ಕಳು ಆರೋಗ್ಯ, ವಿದ್ಯಾಭ್ಯಾಸ, ಕಲಿಯುವ ಸೌಲಭ್ಯ ಮುಂತಾದವುಗಳಿಂದ ವಂಚಿತರಾಗಿದ್ದಾರೆಂದು, ಮೂಲ ಭೂತ ಅಗತ್ಯಗಳನ್ನು ಪೂರೈಸುವವರೆಗೆ ಮಕ್ಕಳ ಸಮಸ್ಯೆಗಳಿಗೆ ಪರಿಹಾರ ಅಸಾಧ್ಯವೆಂಬ ವೇದಿಕೆಗಳಿಗೆ ಮಾತ್ರ ಸೀಮಿತವಾದ ಭಾಷಣಗಳನ್ನು ಮಾಡಲಾಯಿತು.

ನಮ್ಮ ಸಂವಿದಾನವು ಹದಿನಾಲ್ಕು ವರ್ಷ ವಯಸ್ಸಿನ ಎಲ್ಲ ಮಕ್ಕಳಿಗೆ ಹಾಗೂ ಕಡ್ಡಾಯ ಶಿಕ್ಷಣಕ್ಕೆ ಅವಕಾಶವನ್ನು ಮಾಡಿಕೊಟ್ಟಿದೆ. ಸ್ವಾತಂತ್ರ್ಯ ಬಂದು ನಲವತ್ತು ವರ್ಷವಾದರೂ ಹೆಣ್ಣು ಮಕ್ಕಳು ಅನಕ್ಷರಸ್ಥರಾಗಿ ಉಳಿಯುತ್ತಿರುವುದು ತೂಕಡಿಸುತ್ತಿರುವ ನಮ್ಮ ಸರ್ಕಾರದ ಧೋರಣೆಯ ಪ್ರತಿಬಿಂಬವಾಗಿದೆ.

ನಾಲ್ಕನೆ ಪಂಚವಾರ್ಷಿಕ ಯೋಜನೆಯ ಕೊನೆಯಲ್ಲಿ 6ರಿಂದ 11 ವರ್ಷವಯಸ್ಸಿನ ಹೆಣ್ಣು ಮಕ್ಕಳಲ್ಲಿ 66% ಹೆಣ್ಣು ಮಕ್ಕಳು ಶಾಲೆಗೆ ದಾಖಲಾಗಿದ್ದರು. 11ರಿಂದ 14 ವರ್ಷ ವಯಸ್ಸಿನ ಹೆಣ್ಣು ಮಕ್ಕಳಲ್ಲಿ ಶಾಲೆಗೆ ದಾಖಲಾದವರು ಸರಾಸರಿ 22. ಆದರೆ ಇದು ಶಾಲೆಗೆ ದಾಖಲಾದ ಗಂಡು ಮಕ್ಕಳ ಸಂಖ್ಯೆಗಿಂತ ತೀರಾ ಕಡಿಮೆಯಾಗಿತ್ತು.

1ಂದ 5ನೇ ತರಗತಿಯಲ್ಲಿ ಓದುತ್ತಿದ್ದ ಮೂವರು ವಿದ್ಯಾರ್ಥಿನಿಯರಲ್ಲಿ ಒಂದು ಹೆಣ್ಣು ಮಗು ಶಾಲೆಯನ್ನು ಬಿಡುತ್ತಿತ್ತು. 5ರಿಂದ 9ನೆಯ ತರಗತಿಯಲ್ಲಿ ಓದುತ್ತಿದ್ದ 5ಜನ ಹುಡುಗಿಯರಲ್ಲಿ ಒಂದು ಹೆಣ್ಣು ಮಗು ಶಾಲೆ ಬಿಡುತ್ತಿತ್ತು. 1965 ರಲ್ಲಿ ನಡೆಸಲಾದ ಅಧ್ಯಯನವೊಂದರ ಪ್ರಕಾರ, ಸರಾಸರಿ 17ಕ್ಕಿಂತ ಕಡಿಮೆ ಹಳ್ಳಿಯ ಹೆಣ್ಣು ಮಕ್ಕಳು ಸೆಕೆಂಡರಿ ಶಾಲೆಗಳಲ್ಲಿ ಓದುತ್ತಿದ್ದರು. ಸೆಕೆಂಡರಿ ವಿದ್ಯಾಭ್ಯಾಸ ಇಂದಿಗೂ ಮಧ್ಯಮ, ಹಾಗೂ ಕೆಳ ಮಧ್ಯಮವರ್ಗದ ಹೆಣ್ಣು ಮಕ್ಕಳಿಗೆ ಸೀಮಿತವಾಗಿದೆ.

ಪುಸ್ತಕದಲ್ಲಿ ಬಳಕೆಯಲ್ಲಿರುವ ಹಲವಾರು ಕಾನೂನುಗಳು, ಮಕ್ಕಳನ್ನು ಕೆಲಸಕ್ಕೆ ನಿಯಮಿಸಿಕೊಳ್ಳಲು ಒಂದು ನಿರ್ದಿಷ್ಟ ವಯಸ್ಸನ್ನು ನಿರ್ಧರಿಸಿದ್ದರೂ ಸಾಮಾನ್ಯವಾಗಿ ಇಂತಹ ಕಾನೂನನ್ನು ಉಲ್ಲಂಘಿಸಲಾಗುತ್ತದೆ. ತಾಯಿಯರಾದರೂ ಅನಿವಾರ್ಯವಾಗಿ ಎಳೆಮಕ್ಕಳನ್ನು ದುಡಿತಕ್ಕೆ ಹಚ್ಚುತ್ತಾರೆ.

ಸಾಮಾನ್ಯವಾಗಿ ಈ ಎಳೆಯ ಬಾಲಕಿಯರು ಮಾಡುವ ಬಹುಪಾಲು ಕೆಲಸಗಳು ಸಂಘಟಿತ ವ್ಯಾಪ್ತಿಗೆ ಸೇರದೆ ಅಗೋಚರವಾಗಿ ಉಳಿಯುತ್ತವೆ.

ಭಾವಿಜನಾಂಗದ ಪ್ರಜೆಗಳಾಗುವ, ಭವಿಷ್ಯದ ಕಣ್ಣುಗಳಾದ ಈ ಮಕ್ಕಳ ಶೋಷಣೆ ಅವಮಾನವೀಯ ಅಮಾನುಷ. ಬಡತನದ ಬೆಂಕಿಯಲ್ಲಿ ಬೇಯುತ್ತಿರುವ ಕುಟುಂಬಗಳಿಗೆ ಆದಾಯತರುವ ಇವರ ಸ್ಥಿತಿಗಳನ್ನು ಕೇವಲ ಕಾಗದದಲ್ಲಿರುವ ಕಾನೂನುಗಳಿಂದ ಬದಲಾಯಿಸಲು ಸಾಧ್ಯವಿಲ್ಲ. ಎರಡು ಹೊತ್ತು ಹೊಟ್ಟೆ ತುಂಬಾ ಊಟ, ಮೈತುಂಬಾ ಬಟ್ಟೆ. ನೆತ್ತಿಯ ಮೇಲೊಂದು ಸೂರನ್ನು ಒದಗಿಸುವುದರ ಜೊತೆಯಲ್ಲಿ, ಸ್ತ್ರೀಯರ ಬಗೆಗಿರುವ ತಾರತಮ್ಯ ಮೌಲ್ಯಗಳು ಬದಲಾಗುವವರೆಗೂ ಈ ಹೆಣ್ಣು ಮಕ್ಕಳು ಕಗ್ಗತ್ತಲಲ್ಲಿ ತಡಕಾಡುತ್ತಲೇ ಬೆಳೆಯಬೇಕಾಗುತ್ತವೆ.



ಸಣ್ಣ ಕಥೆ

# ಫೆಲ್ಲೋ

ಅಮೃತಾ ಪ್ರೀತಮ್

'ಒಲೆಯ ಮೇಲಿದ್ದ ಪಾತ್ರೆಯ ಕಡೆ ನೋಡಿದ'
ಫೆಲ್ಲೋಗೆ ಪಾತ್ರೆಯಲ್ಲಿ ತನ್ನ ನಗೆಯನ್ನು
ಹುರಿಯುತ್ತಾ ಇದ್ದಾರೇನೋ ಎನಿಸಿತು.

''ಫೆಲ್ಲೋನ ತಾಯಿ, ಹತ್ತಿರ ಬಂದು ನೋಡಿಲ್ಲಿ" ಫೆಲ್ಲೋನ ಮುದಿ ತಂದೆ ತನ್ನ ಕಾಲನ್ನು ನೀಡಿ ಎಚ್ಚರಿಕೆಯಿಂದ ಪರೀಕ್ಷಿಸಿದ. "ಊತ ಜಾಸ್ತಿಯಾದಂತೆ ಕಾಣುತ್ತದೆ" ಎಂದು ನುಡಿದ. ಅವನ ಕಾಲು ನೋವಿನಿಂದ ಹೊಡೆದುಕೊಳ್ಳುತ್ತಿತ್ತು. ಅವನು ಮುಖ ಹಿಂಡಿ ಕಾಲನ್ನು ಹಿಂದಕ್ಕೆ ಎಳೆದುಕೊಂಡ.

ಹುಕುಂಚಂದನ ಮೊದಲನೆ ಹೆಂಡತಿ, ಫೆಲ್ಲೋನ ತಾಯಿ ಬಹಳ ವರ್ಷಗಳ ಮುಂಚೆಯೇ ಮರಣ ಹೊಂದಿದ್ದಳು. ಅವಳ ಮರಣಾನಂತರ ಹುಕುಂಚಂದ ತನ್ನ ಧನಬಲದಿಂದ ತರುಣಿಯಾದ ಕರ್ತಾರೋಳನ್ನು ಲಗ್ನವಾಗಿದ್ದ. ಮದುವೆಯಾಗಿ ಎರಡೇ ದಿನಗಳ ನಂತರ ಅವಳನ್ನು ಫೆಲ್ಲೋನ ತಾಯಿ ಎಂದು ಕರೆಯತೊಡಗಿದ. ಕರ್ತಾರೋಗೆ ಹೀಗೆ ಕರೆಸಿಕೊಳ್ಳಲು ಕೊಂಚವೂ ಇಷ್ಟವಿರಲಿಲ್ಲ. "ನನ್ನನ್ನು ನನ್ನ ನಿಜವಾದ ಹೆಸರಿನಿಂದ ಕರೆಯಿರಿ—ಕರ್ತಾರೋ ಎಂದು" ಅವಳು ಸಿಡುಕಿದ್ದಳು. "ನನಗೆ ಫೆಲ್ಲೋನ ತಾಯಿ ಎಂದು ಕರೆಸಿಕೊಳ್ಳಲು ಇಷ್ಟವಿಲ್ಲ."

"ನನ್ನ ಬಂಗಾರಿ, ನಾನು ಫೆಲ್ಲೋನ ತಂದೆಯಾಗಿರುವುದರಿಂದ ನೀನು ಸಹಜವಾಗಿಯೇ ಫೆಲ್ಲೋನ ತಾಯಿಯಾಗುತ್ತೀಯಾ, ಅಷ್ಟೆ" ಹುಕುಂಚಂದ ಹೇಳಿದ. "ನಿನ್ನನ್ನು ಆ ಹೆಸರಿನಿಂದ ಕರೆಯುವುದರಲ್ಲಿ ಏನೂ ತಪ್ಪಿಲ್ಲ"

ಅವಳ ಒತ್ತಾಯದಿಂದಾಗಿ ಹುಕುಂಚಂದ್ ಕೊನೆಗೂ ಕರ್ತಾರೋಳನ್ನು ಅವಳ ಹೆಸರಿನಿಂದಲೇ ಕರೆಯತೊಡಗಿದ. ಆದರೂ ಒಮ್ಮೊಮ್ಮೆ ಅನ್ಯಮನಸ್ಕನಾದಾಗ ಅವನು ಅದೇ ಹಳೆಯ ತಪ್ಪನ್ನು ಮಾಡುತ್ತಿದ್ದ.

ಫೆಲ್ಲೋ ಹುಕುಂಚಂದನಿಗೆ ಭಾರೀ ಪ್ರೀತಿಪಾತ್ರಳಾಗಿದ್ದಳು. ಅವಳ ನಿಜವಾದ ಹೆಸರು ಕೌಸಲ್ಯ ಆಗಿದ್ದರೂ, ಮಮತೆಯಿಂದ ಅವನು ಅದನ್ನು ಫೆಲ್ಲೋ ಎಂದು ಮೊಟಕುಗೊಳಿಸಿದ್ದ. ಕರ್ತಾರೋಗೆ ಆ ಹೆಸರು ಇಷ್ಟವಿರಲಿಲ್ಲ. ಅವಳು ಅದನ್ನು ಮರೆಮಾಚಲು ಯತ್ನಿಸಿರಲಿಲ್ಲ. ಹುಕುಂಚಂದ ನಗುತ್ತಿದ್ದ. "ನನಗೊಬ್ಬ ಮಗನನ್ನು ಹೆತ್ತು ಕೊಡು. ಆಗ ನಾನು ನಿನ್ನನ್ನು ಫೆಲ್ಲೋನ ತಾಯಿ ಎಂದು ಕರೆಯುವುದನ್ನು ನಿಲ್ಲಿಸುತ್ತೇನೆ. ಹುಡುಗನಿಗೆ ಏನು ಹೆಸರಿಡುತ್ತೀಯಾ? ಛನನ್ ಎಂದು ಇಡು. ಆಗ ನಾನು ನಿನ್ನನ್ನು ಛನನ್‌ನ ತಾಯಿ ಎಂದು ಕರೆಯುತ್ತೇನೆ" ಎನ್ನುತ್ತಿದ್ದ. ಆಗ ಕರ್ತಾರೋಳ ಮುಖಭಾವ ಮೃದುವಾಗುತ್ತಿತ್ತು ಅವಳ ಮುಖದಲ್ಲಿ ಕ್ಷೀಣ ನಗೆಯ ಅಲೆ ಕಾಣಿಸಿಕೊಳ್ಳುತ್ತಿತ್ತು.

ಅನುವಾದ : ಶಶಿ

ಅನೇಕ ವರ್ಷಗಳು ಕಳೆದವು. ಆದರೆ ಕರ್ತಾರೋಳನ್ನು ಛನನ್‌ನ ತಾಯಿ ಎಂದು ಕರೆಯಬೇಕೆಂಬ ಹುಕುಂಚಂದನ ನಿರೀಕ್ಷೆ ಕೈಗೂಡಲೇ ಇಲ್ಲ. ಛನನ್ ಅವಳಿಗೆ ಹುಟ್ಟಲಿಲ್ಲ. ಹುಕುಂಚಂದ್ ಅವಳನ್ನು ಕರ್ತಾರೋ ಎಂದೇ ಕರೆಯತೊಡಗಿದ. ಆದರೆ ಅನ್ಯಮನಸ್ಕನಾದಾಗ ಮತ್ತೆ ಫೆಲ್ಲೋನ ತಾಯಿ ಎಂದೇ ಕರೆಯುತ್ತಿದ್ದ.

ದೇಶ ವಿಭಜನೆಗೊಂಡಿತು. ಪಶ್ಚಿಮ ಪಂಜಾಬಿಗೆ ಸೇರಿದ್ದ ಹುಕುಂಚಂದ್ ಪೂರ್ವ ಪಂಜಾಬಿನ ಕರ್ನಾಲಕ್ಕೆ ವಲಸೆ ಹೋದ. ಕರ್ತಾರೋಳ ಯೌವ್ವನವನ್ನು ಬಂಧನದಲ್ಲಿಟ್ಟಿದ್ದ ಹುಕುಂಚಂದ್‌ನ ಧನದ ಮಾಂತ್ರಿಕ

ಶಕ್ತಿ ಮಾಯವಾಯಿತು. ಆದರೆ ಪತಿ–ಪತ್ನಿ ಸಂಬಂಧದ ಸೂಕ್ಷ್ಮ ಎಳೆಯಲ್ಲಿ ಅನೇಕ ಗಂಟುಗಳು ಬಿದ್ದಿದ್ದರೂ, ಅದು ಇನ್ನೂ ಹರಿದುಹೋಗಿರಲಿಲ್ಲ. ಅವನ ಮುದಿತನ ಒಂದೇ ಆಧಾರವಾದ ಸಂಪತ್ತು ಎಂಬ ಊರುಗೋಲು ಬಿದ್ದುಹೋಗಿ, ಅವನು ದುರ್ಬಲನಾಗಿ ಬಿಟ್ಟಿದ್ದ.

"ಫೆಲ್ಲೋನ ತಾಯಿ !" ಈ ಬಾರಿ ಹುಕುಂಚಂದ್ ತನ್ನ ದನಿಯನ್ನು ಕೊಂಚ ಏರಿಸಿದ.

"ಫೆಲ್ಲೋನ ತಾಯಿಗೆ ಸಾವು ಬಂದು ನೆಮ್ಮದಿ ಕೊಡೋದಿಲ್ಲ. ಅವಳ ಸಂಕಟ ಮುಗಿಯುವುದೇ ಇಲ್ಲ" ಕರ್ತಾರೋ ಗೊಣಗಿಕೊಂಡು ಅಡುಗೆಮನೆಯಿಂದ ಕೈಗಳನ್ನು ತನ್ನ ಸೆರಗಿನಲ್ಲಿ ಒರೆಸಿಕೊಳ್ಳುತ್ತಾ ಹೊರಬಂದಳು. "ಹೂಂ, ಏನೀಗ"

"ಇಂಥ ಅಶುಭ ಮಾತಾಡಬೇಡ. ಫೆಲ್ಲೋನ ಒಬ್ಬ ತಾಯಿ ಸತ್ತೇ ಹೋಗಿದ್ದಾಳೆ. ಇರುವ ಮತ್ತೊಬ್ಬಳನ್ನು ಏಕೆ ಸಾಯಿಸಲು ಹೊರಟಿದ್ದಿ ?"

"ನಾನೇ ಅವಳನ್ನು ಕೊಂದಂತೆ ಮಾತಾಡುತ್ತೀರಲ್ಲ, ಅವಳು ಸಾಯಬಾರದಿತ್ತು. ಆಗ ಅವಳ ಜಾಗದಲ್ಲಿ ನಾನು ಬಂದಿರಬೇಕಾದ ದೌರ್ಭಾಗ್ಯವಾದರೂ ತಪ್ಪುತ್ತಿತ್ತು. ಈಗೇನು ಅವಳು ಶಾಂತಿಯಾಗಿ ಮಲಗಿದ್ದಾಳೆ. ನಾನೇ ತಾನೇ ಮುಳ್ಳುಗಳನ್ನು ಹೆಕ್ಕಲು ಬದುಕಿ ಉಳಿದಿರುವುದು."

"ಅರೆ, ನೀನೇಕೆ ಮುಳ್ಳುಗಳನ್ನು ಹೆಕ್ಕಬೇಕು ? ಅದು ಭಾರೀ ಕಷ್ಟದಕೆಲಸ. ನಿನ್ನಿಂದ ಅದು ಸಾಧ್ಯವಿಲ್ಲ. ನಿನ್ನ ಕೆಲಸ ನೀನು ಮಾಡಿಕೊಂಡು ಹೋಗು ಸಾಕು, ಆ ಮುಳ್ಳುಗಳನ್ನು ನನ್ನ ಮಾಂಸಖಂಡಗಳಿಗೆ ಚುಚ್ಚುತ್ತಾ ಹೋಗು."

"ಹಾಗಾದರೆ ನಾನು ನಿಮ್ಮನ್ನು ಸೂಜಿಯಿಂದ ಚುಚ್ಚುತ್ತಿದ್ದೇನೇನು ? ನಿಮ್ಮ ಮುದ್ದು ಮಗಳನ್ನು ಕೂಡಾ ಏನು ? ನೀವು ನಿಮ್ಮ ಮಂಚದ ಮೇಲೆ ಸರದಾರನಂತೆ ಆಸೀನರಾದಾಗ ತಟ್ಟೆ ತುಂಬಾ ಊಟ ತಂದುಕೊಡೋದು ನಾನು ಎನ್ನುವುದು ಏಕೆ ಮರೆಯುತ್ತೀರಾ ? ನಿಮ್ಮ ಮುದ್ದುಮಗಳಿಗೂ ನಾನು ಬೇಯಿಸಿ ಹಾಕುತ್ತೇನೆ. ಅದನ್ನೇ ನೀವು ನಿಮ್ಮ ಮತ್ತು ನಿಮ್ಮ ಮುದ್ದುಮಗಳ ಮಾಂಸಕ್ಕೆ ಮುಳ್ಳು ಚುಚ್ಚುವುದು ಅನ್ನುತ್ತೀರೇನು ?"

"ಕರ್ತಾರೋ, ನೀನ್ಯಾಕೆ ಇಷ್ಟು ಕಷ್ಟ ಪಡುತ್ತೀಯಾ ? ಹುಡುಗೀನ ಅಡುಗೆ ಮಾಡಲು ಬಿಡು ಎಂದು ನಾನು ನಿನಗೆಷ್ಟು ಬಾರಿ ಹೇಳಿದ್ದೇನೆ. ಕೆಲವು ಚಪಾತಿಗಳನ್ನು ಬೇಯಿಸುವುದೇನೂ ಅವಳಿಗೆ ಕಷ್ಟವಲ್ಲ"

"ಅವಳಿಗೆ ಆ ಅಕ್ಕರೆ ಇದ್ದರೆ ತಾನೆ ! ಅವಳಿಗೆ ಅಡುಗೆ ಮಾಡಲು ಮನಸ್ಸೇ ಇಲ್ಲ. ಬುಟ್ಟಿಮಾರಲಿಕ್ಕೆ ಹೋದವಳು ಅಂದರೆ ಇಡೀ ದಿನ ಹೋಗೇ ಬಿಡ್ತಾಳೆ."

"ಅವಳನ್ನು ಬುಟ್ಟಿ ಮಾರಲಿಕ್ಕೆ ಕಳಿಸಬೇಡಾಂತ ನಾನೆಷ್ಟು ಸರ್ತಿ ಹೇಳಿದೀನಿ. ಎಲ್ಲಾ ರೀತಿಯ ಜನರೂ ಇರುತ್ತಾರೆ. ಎಲ್ಲೆಲ್ಲಿಂದಲೋ ಬಂದಿರೋ ಒಳ್ಳೆಯವರೂ ಇರುತ್ತಾರೆ. ಕೆಟ್ಟವರೂ ಇರುತ್ತಾರೆ. ಅವರು ಏನು ಕೇಡು ಬೇಕಾದರೂ ಮಾಡುತ್ತಾರೆ."

"ಫೆಲ್ಲೋನ ತಂದೆ, ನೀವು ಹಣ ಸಂಪಾದಿಸುವ ಸ್ಥಿತಿಗೆ ಬಂದು ಆ ದುಡ್ಡನ್ನು ನನ್ನ ಅಂಗೈಯಲ್ಲಿಡುವವರೆಗೆ ಉಪದೇಶ ಏನನ್ನೂ ಮಾಡಬೇಡಿ ಎಂದು ನಾನೂ ಇನ್ನೂ ಇಷ್ಟು ಬಾರಿ ಹೇಳಬೇಕು ನಿಮಗೆ ? ನೀವು ಮಾಡುವುದು ಈ ಮಂಚದ ಮೇಲೆ ಸೋಮಾರಿಯಂತೆ ಕುಳಿತು ವ್ಯರ್ಥ ಮಾತುಕತೆಯಲ್ಲಿ ಕಾಲ ಕಳೆಯುವುದು ಅಷ್ಟೇ" ಕರ್ತಾರೋ ಬಿಕ್ಕುತ್ತಾ ಅಳತೊಡಗಿದಳು

ಹುಕುಂಚಂದ್‌ನ ಮನಸ್ಸು ಕರಗಿತು. "ನೀನು ಹೇಳುವುದು ಸರಿ." ಅವನು ಹೇಳಿದ. "ಉಪದೇಶಿಸುವುದು ಈಗ ನನ್ನ ಪಾಲಿಗೆ ಸರ್ವಥಾ ಉಚಿತವಲ್ಲ. ಧನಲಕ್ಷ್ಮಿ ನನ್ನನ್ನು ತೊರೆದಿದ್ದಾಳೆ. ನನ್ನ ಆರೋಗ್ಯ ಹಾಳಾಗಿದೆ. ನಿನ್ನ ನಾಲಿಗೆ ಕಟ್ಟದಿರಬಹುದು. ಆದರೆ ಈಗ ನನ್ನ ಪಾಲಿಗೆ ಉಳಿದಿರುವುದು ನೀನೊಬ್ಬಳೆ. ಹೊತ್ತಿಗೆ ಸರಿಯಾಗಿ ಹೊಟ್ಟೆಗಾದರೂ ಹಾಕುತ್ತೀಯಾ."

ಹುಕುಂಚಂದ್ ಹತಾಶನಾಗಿದ್ದ. "ಸ್ವಲ್ಪ ಎಣ್ಣೆ ಕಾಯಿಸಿ ಅದರಲ್ಲಿ ಬೆಳ್ಳುಳ್ಳಿ ಹಾಕು. ನಾನು ಎಣ್ಣೆಯನ್ನು ನನ್ನ ಮೊಣಕಾಲಿನ ಗಂಟುಗಳಿಗೆ ಹಚ್ಚಿ ಉಜ್ಜುತ್ತೇನೆ. ದಮ್ಮಯ್ಯ ಅಂತೀನಿ, ಉದ್ದಿನಬೇಳೆ ಬೇಯಿಸಿಡಬೇಡ. ಅದು ನನ್ನ ಮೈಗೆ ಆಗುವುದೇ ಇಲ್ಲ".

"ಉದ್ದಿನಬೇಳೆ ಅಲ್ಲ, ಮಾಂಸ. ಇವತ್ತು ನಾನು ನಿಮಗೆ ಮಾಂಸ ಬೇಯಿಸುತ್ತೇನೆ."

"ದೇವರು ನಿನಗೆ ಒಳ್ಳೆದು ಮಾಡಲಿ. ನೀನು ಹೇಳಿದ್ದು ನಿಜ ಏನು ? ಮಾಂಸದ ರುಚಿ ನೋಡಲು

ನಾನು ಹಂಬಲಿಸುತ್ತಿದೀನಿ. ನಾನು ಮಾಂಸ ತಿನ್ನದೆ ಒಂದು ವರ್ಷವೇ ಆಗಿಬಿಟ್ಟಿತು. ಪ್ರತಿದಿನವೂ ಬೇಳೆ, ಹುಕುಂಚಂದ್ ಗುಣವಾಗಬೇಕಿದ್ದರೆ ಪ್ರತಿ ದಿನವೂ ಮಾಂಸದ ಸಾರು ಸೇವಿಸು ಎಂದು ವೈದ್ಯರು ಕೂಡಾ ಹೇಳಿದರು. ಹೌದು. ಇವತ್ತು ನೀನು ಮಾಂಸ ಬೇಯಿಸಲೇ ಬೇಕು. ತುಂಬಾ ತುಂಬಾ ಮಾಂಸ ಬೇಯಿಸು." ಹುಕುಂಚಂದ್ ತನ್ನ ಊತ ಬಂದಿದ್ದ ಕಾಲುಂಗಳನ್ನು ನೋಡಿದ. ತನ್ನ ನಾಲಗೆ ಗಿಂತಲೂ ತನ್ನ ಮೊಣಕಾಲು ಗಂಟುಗಳೇ ಮಾಂಸ ಸವಿಯಲು ಹಾತೊರೆಯುತ್ತಿವೆ ಎಂದೆನಿಸಿತು ಅವನಿಗೆ.

"ಹೌದು, ಹೌದು, ಖಂಡಿತವಾಗಿ ಮಾಂಸದ ಸಾರು ಮಾಡ್ತೀನಿ" ಕರ್ತಾರರೋ ನುಡಿದಳು. "ನನ್ನ ತಲೆಯನ್ನೇ ಕತ್ತರಿಸಿ ಅದರ ಸಾರು ಮಾಡ್ತೀನಿ."

"ಓ, ನೀನು ಯಾವಾಗಲೂ ಅಶುಭವನ್ನೇ ಹೇಳ್ತಿರ್‍ತೀಯಲ್ಲೇ. ಅದೃಷ್ಟವಿದ್ದರೆ ಅವಳು ಇಂದು ನಾಲ್ಕು ಬುಟ್ಟಿಗಳ ಬದಲು ಇಪ್ಪತ್ತು ಬುಟ್ಟಿಗಳನ್ನೇ ಮಾರಬಹುದು. ಯಾರಿಗೆ ಗೊತ್ತು ? ಓ ಫೆಲ್ಲೋ, ನನ್ನ ಚಿನ್ನಾರಿ, ನನ್ನ ಮುದ್ದು ಹುಡುಗಿ, ಇಂದು ನನ್ನ ಕೈ ಬಿಡಬೇಡ. ಇದು ನನ್ನ ಮರ್ಯಾದೆಯ ಪ್ರಶ್ನೆ ಇವತ್ತು ಪೂರಾ ಇಪ್ಪತ್ತು ಬುಟ್ಟಿಗಳನ್ನು ಮಾರಬೇಕು. ಒಂದು ಮಿಕ್ಕಬಾರದು. ಮನೆಗೆ ಹಿಂದಿರುಗುವಾಗ ಮಾಂಸದಂಗಡಿಯಲ್ಲಿ ಅರ್ಧಸೇರು ಮಾಂಸ ಕೆಗೆದು ಕೊಂಡು ಬಾ. ಹೋಗು ಪುಟ್ಟಿ, ಬಸ್ಸುಗಳ ಬರುವ ಸಮಯವಾಯಿತು. ನೋಡಿಲ್ಲಿ, ಬೆಳ್ಳುಳ್ಳಿ, ಈರುಳ್ಳಿ, ಹಸಿ ಶುಂಠಿ, ಹಸಿಮೆಣಸಿನಕಾಯಿ ತರೋದಕ್ಕೆ ಮರೆಯ ಬೇಡ. ಇಲ್ಲದಿದ್ದರೆ ನಿಮ್ಮಮ್ಮ ಬರೀ ಮಾಂಸ ಬೇಯಿಸಿ ನನ್ನ ಕುಕ್ಕುತ್ತಾಳೆ."

ಫೆಲ್ಲೋ ತನ್ನ ಈ ವಿಲಕ್ಷಣ ಮಾತುಗಳಿಗೆ ನಕ್ಕು ಬಿಡಬಹುದೆಂದುಕೊಂಡ ಹುಕುಂಚಂದ್. ಆದರೆ ಅವಳು ತನ್ನ ಬುಟ್ಟಿಗಳತ್ತ ಉದಾಸೀನಭಾವದಿಂದ ನೋಡುತಾ ಕುಳಿತಿದ್ದಳು.

"ಬುಟ್ಟಿ ಕೊಂಡುಕೊಳ್ಳಬೇಕು ಅಂದುಕೊಂಡಿರೋ ಜನರೂ ಕೂಡಾ ಅವಳ ಮುಖ ನೋಡಿಯೇ ವಾಪಸ್ಸು ಹೋಗ್ತಾರೆ." ಕರ್ತಾರರೋ ಹೇಳಿದಳು. "ಅವಳ ಮುಖ ಒಂದು ಸತ್ತ ಮೀನಿನ ಮುಖದಂತೆಯೇ ಇದೆ."

ಹುಕುಂಚಂದ್‌ನ ಮೇಲಿನ ಕೋಪವನ್ನು ಅವಳೀಗ ಫೆಲ್ಲೋನ ಮೇಲೆ ತೋರಿಸತೊಡಗಿದಳು.

"ಕರ್ತಾರರೋ, ಹುಡುಗಿ ಮುಖದಲ್ಲಿ ಯಾವ ತಪ್ಪೂ ಕಾಣಿಸೋದಿಲ್ಲ." ಹುಕುಂಚಂದ್ ನುಡಿದ. "ನೀನು ವಿನಾಕಾರಣ ಅವಳಲ್ಲಿ ತಪ್ಪು ಕಂಡು ಹಿಡೀತಿ ದೀಯ." ಕರ್ತಾರರೋಳ ಕೋಪವನ್ನು ತನ್ನ ಮೇಲೆ ತಿರುಗಿಸಿಕೊಳ್ಳಲು ಹುಕುಂಚಂದ್ ಬಯಸಿದ.

ಆದರೆ ಕರ್ತಾರರೋ ಅಷ್ಟು ಸುಲಭವಾಗಿ ಬಿಟ್ಟು ಕೊಡುವವಳಾಗಿರಲಿಲ್ಲ. ಅವಳು ಫೆಲ್ಲೋನತ್ತ ಕಠಿಣ ವಾಗಿ ನೋಡಿದಳು. "ಗಿರಾಕಿಗಳನ್ನು ನಗೆಮೊಗದಿಂದ ಸ್ವಾಗತಿಸಿದರೆ, ಒಂದು ಬುಟ್ಟಿ ತೊಗೋಬೇಕು ಎಂದಿರು ವವರು ಎರಡು ಬುಟ್ಟಿ ಕೊಂಡುಕೊಳ್ತಾರೆ. ಎಷ್ಟು ಕಾರುಗಳು ಪ್ರತಿನಿತ್ಯ ಈ ಕಡೆಯಿಂದ ಹೋಗುತ್ತವೆ. ಅವರಿಗೆ ಎರಡು ಪುಟ್ಟ ಬುಟ್ಟಿಗಳನ್ನು ಕೊಂಡುಕೊಳ್ಳು ವುದು ಕಷ್ಟವೇನು ? ಬುಟ್ಟಿ ಏನೂ ಭಾರವಾಗಿಲ್ಲ. ಎಷ್ಟು ಒಳ್ಳೆ ಬಣ್ಣಗಳ ಬುಟ್ಟಿಗಳು ನೋಡಿ. ಆದರೆ ಈ ಹುಡುಗಿ ಗಿರಾಕಿ ಎದುರು ಬಾಯಿ ಮುಚ್ಚಿಕೊಂಡು ನಿಂತಿರ್‍ತಾಳೆ. ಅವರು ಟೀ ಅಂಗಡಿಯಲ್ಲಿ ಟೀ ಸೇವಿಸು ತ್ತಿರುವಾಗ ಇವಳು ಸಿಹಿಯಾಗಿ ಒಂದೆರಡು ಮಾತಾಡಿ ದರೆ ಅವರು ಬುಟ್ಟಿ ಕೊಂಡುಕೊಳ್ಳಬೇಕು ಎನ್ನುವ ಆಸೆಯನ್ನು ಹತ್ತಿಕ್ಕಲಾರರು..."

ಫೆಲ್ಲೋ ತನ್ನ ಕಿವಿಗಳನ್ನು ಬಟ್ಟೆಯಿಂದ ತುಂಬಿ ಕೊಂಡಿದ್ದಳೋ ಎಂಬಂತೆ ಎಲ್ಲವನ್ನೂ ವಿರಳಿತದ ಮುಖಭಾವದಿಂದ ಕೇಳಿಸಿಕೊಂಡಳು. ಅವಳು ಎಷ್ಟೋ ಬಾರಿ ತನ್ನ ತಾಯಿಗೆ ಹೇಳಿದ್ದಳು, "ಅಮ್ಮಾ ಈ ಬುಟ್ಟಿ ಗಳನ್ನು ಯಾರೂ ಗಮನಿಸುವುದೇ ಇಲ್ಲ. ಬಸ್ ಮತ್ತು ಲಾರಿ ಡ್ರೈವರ್‌ಗಳು ಈ ಬುಟ್ಟಿಗಳನ್ನು ಕೊಳ್ಳಬಹುದು. ಆದರೆ ಕಾರುಗಳಲ್ಲಿ ಪ್ರಯಾಣ ಮಾಡುವವರು ನನ್ನ ಬುಟ್ಟಿಗಳತ್ತ ನೋಡುವುದೂ ಇಲ್ಲ. ನಾನು ಅವರ ಕಾರುಗಳ ಹತ್ತಿರ ಹೋದರೆ ಅವರು ನನ್ನ ಕಡೆಗೆ ಸಿಡುಕಿ ನಿಂದ ಬೊಗುಳುತ್ತಾರೆ, "ಕಾರಿನಿಂದ ದೂರ ಹೋಗು, ನಿನ್ನ ಕೊಳೆಯಾದ ಕೈಗಳು ಗಾಜಿನ ಕಿಟಕಿಗಳನ್ನು ಹೊಲಸು ಮಾಡಬಹುದು" ಎಂದು ನನ್ನನ್ನು ಎಚ್ಚರಿಸು ತ್ತಾರೆ.

ಆದರೆ ಕರ್ತಾರರೋಗೆ ನಂಬಿಕೆಯಾಗಿರಲಿಲ್ಲ. ಕಾರಿನವರ ಮೇಲೆ ಸಿಡಿದು ಬೀಳುವ ಬದಲು ಅವಳು

ತನ್ನ ಕೋಪವನ್ನು ಹುಡುಗಿಯ ಕಡೆ ತಿರುಗಿಸಿದಳು. "ಬುಟ್ಟಿಗಳನ್ನು ಹೇಗೆ ಮಾರಬೇಕು ಎನ್ನುವುದೇ ನಿನಗೆ ಗೊತ್ತಿಲ್ಲ" ಎಂದಳು ಮುನಿಯುತ್ತಿದ್ದಳು. "ಅವರ ಬಳಿ ಹೋದಾಗ ನಗು ಸೂಸಬೇಕು. ಆದರೆ ನಿನ್ನ ಮುಖ ಒಂದು ಹಿತ್ತಾಳೆ ಲೋಟಾ ಎಂಬಂತೆ ನೀನು ಭಾವರಹಿತಳಾಗಿ ಅವರೆದುರು ನಿಂತುಕೊಳ್ತೀ. ಯಾರು ತಾನೇ ನಿನ್ನ ಬುಟ್ಟಿ ತೆಗೊಳ್ಳೋಕೆ ಇಷ್ಟ ಪಡುತ್ತಾರೆ?"

ಫೆಲ್ಲೋ ತನ್ನ ಮುಖವನ್ನು ಹಿತ್ತಾಳೆ ಲೋಟದಂತೆ ಮಾಡದಿರಲು ಬಹಳ ಪ್ರಯತ್ನಿಸಿದಳು. ಆದರೆ ಅದು ಮತ್ತಷ್ಟು ಅಸಹ್ಯವಾಯಿತು. "ಅದ್ಯಾಕೆ ಹಾಗೆ ಹಲ್ಲು ಕಿರೀತೀದೀಯಾ ?" ಅವಳು ನಗುತ್ತಾ ಬಳಿಸಾರಿದಾಗ ಕಾರಿನಲ್ಲಿದ್ದ ಮನುಷ್ಯನೊಬ್ಬ ಹೇಳಿದ "ನಡೆ ಇಲ್ಲಿಂದ. ಈ ಕೆಲಸಕ್ಕೆ ಬಾರದವುಗಳನ್ನು ಹಳ್ಳಿಗಮಾರರು ತೊಗೋಬೇಕಷ್ಟೇ !"

ಒಂದು ದಿನ ಕರ್ತಾರೋ ಫೆಲ್ಲೋಳ ಮೇಲೆ ತೀವ್ರ ವಾಗ್ಬಾಣ ಸುರಿಸಿದಳು. "ಆ ಲಫಂಗ ! ಯಾರವನು ? ಬಸ್‌ಸ್ಟ್ಯಾಂಡಿನಲ್ಲಿ ಪತ್ರಿಕೆಗಳನ್ನು ಮಾರುತ್ತಾನಲ್ಲಾ, ಅದೇ ಆ ರತ್ನ. ಈ ಹುಡುಗಿ ಅಂತೂ ಅವನನ್ನು ನೋಡಿದ ತಕ್ಷಣ ಕಣ್ಣು ಬಾಯಿ ತೆರೆದುಕೊಂಡು ನಿಂತುಕೊಳ್ತಾಳೆ. ಆಗ ನಗು ಯಾವುದೇ ಪ್ರಯಾಸವೂ ಇಲ್ಲದೇ ಸುಲಭವಾಗಿ ಬಂದ್ಬಿಡುತ್ತೆ."

"ಕರ್ತಾರೋ, ಕೋಳಿಯಂತೆ ಕೊಳಕನ್ನು ಕೆದರುವುದನ್ನು ನಿಲ್ಲಿಸು !" ಹುಕುಂಚಂದ್ ಅವಳನ್ನು ತೀಕ್ಷ್ಣವಾಗಿ ಗದರಿಸಿದ.

"ನಾನೇನು ತಪ್ಪು ಹೇಳಿದೆ ?" ಕರ್ತಾರೋ ಮಾರುತ್ತರಿಸಿದಳು. "ಈ ನಿಮ್ಮ ರಾಜಕುಮಾರಿಗೆ ಪ್ರೇಮಿಸುವ ಆಸೆ ಹುಟ್ಟಿದೆ. ಆದರೆ ಅವಳು ತನ್ನ ಪ್ರೇಮಿ ಎಂಥವನೆಂದು ಮೊದಲು ಅರ್ಥಮಾಡಿಕೊಂಡು ಅವನ ಬಗ್ಗೆ ಸ್ವಲ್ಪವಾದರೂ ತಿಳಿದುಕೊಳ್ಳಬೇಕು. ಆತ ಅಗ್ಗದ ವಾರ್ತಾಪತ್ರಿಕೆಗಳನ್ನು ಹೊತ್ತುಕೊಂಡು ಬಸ್‌ಸ್ಟ್ಯಾಂಡಿನಲ್ಲಿ ಮಾರುತ್ತಾನೆಂದು ನಿನಗೆ ಗೊತ್ತು. ಅವನು ಇವಳನ್ನು ಹೇಗೆ ಸಾಕಬಲ್ಲ ?"

ಕರ್ತಾರೋಗೆ ತನ್ನ ಮಾತು ಮುಗಿಸಲು ಅವಕಾಶ ಕೊಡದೆ ಫೆಲ್ಲೋ ಸೆರಗಿನಿಂದ ತನ್ನ ಮುಖ ಮರೆಸಿಕೊಂಡು ಬುಟ್ಟಿಗಳ ಹೊರೆಯನ್ನು ತಲೆಯ ಮೇಲೆ ಹೊತ್ತು ಬಸ್‌ಸ್ಟ್ಯಾಂಡಿನ ಕಡೆ ಹೊರಟಳು.

"ಆತ ಅಗ್ಗದ ವಾರ್ತಾಪತ್ರಿಕೆಗಳನ್ನು ಹೊತ್ತುಕೊಂಡು ಬಸ್‌ಸ್ಟ್ಯಾಂಡಿನಲ್ಲಿ ಮಾರುತ್ತಾನೆ" ಈ ಪದಗಳು ಅವಳ ಕಿವಿಯಲ್ಲಿ ಮೊಳಗುತ್ತಾ ಹುಣ್ಣಿನಂತೆ ಅವಳನ್ನು ನೋಯಿಸಿದವು. ಆದರೆ ಬಸ್‌ಸ್ಟ್ಯಾಂಡ್ ತಲುಪಿದೊಡನೆ ಹೋಗುತ್ತಾ, ಬರುತ್ತಾ ಇದ್ದ ಬಸ್ಸುಗಳನ್ನು ಗಮನಿಸಿದ, ಅವಳ ಕಣ್ಣುಗಳು ವಾರ್ತಾಪತ್ರಗಳನ್ನು ಮಾರುವಾತನನ್ನು ಅರಸಿದವು.

"ಫೆಲ್ಲೋ, ನೀ ಇಂದು ಬಹಳ ತಡವಾಗಿ ಬಂದೆಯಲ್ಲ" ಸರ್‍ರನೆ ಅವಳ ಹಿಂದಿನಿಂದ ಬಂದ ರತ್ನ ಅವಳೆದುರು ನಿಂತ.

"ನಾನು..." ಎಂದು ಬಾಯ್ತೆರೆದವಳು ಮೌನ ವಹಿಸಿ ಅವನ ಮುಖವನ್ನೇ ದಿಟ್ಟಿಸಿದಳು. ತನ್ನ ಮುಖ ಈಗ ಲೋಟಾದಂತೆ ಕಾಣುತ್ತಿಲ್ಲ ಎಂದವಳಿಗೆ ಗೊತ್ತಿತ್ತು. "ನಾನೊಂದು ಬುಟ್ಟಿಯನ್ನು ಮುಗಿಸುತ್ತಿದ್ದೆ. ಚೆನ್ನಾಗಿದೆ, ಅಲ್ಲವೇ ? ನಾನು ಅದರಲ್ಲಿ ಹಸಿರು ಹೂಗಳನ್ನು ಹೆಣೆದಿದ್ದೇನೆ."

"ನೀನು ಸುಂದರವಾದ ಬುಟ್ಟಿಗಳನ್ನು ಮಾಡುತ್ತೀಯಾ", ರತ್ನ ಹೇಳಿದ. "ಆದರೆ ನೀನು ಎಲ್ಲರ ಹಿಂದೆ ಓಡೋದು ನನಗಿಷ್ಟವಿಲ್ಲ."

"ಆದರೆ ನೀನೂ ನಿನ್ನ ಪತ್ರಿಕೆಗಳನ್ನು ಎಲ್ಲರಿಗೂ ತೋರಿಸ್ತೀಯಾ. ಹೌದೋ ಅಲ್ಲವೋ ?" ಫೆಲ್ಲೋ ನಕ್ಕಳು.

"ನನ್ನ ಮಾತೇ ಬೇರೆ. ನಾನು ಒಬ್ಬ ಗಂಡಸು. ನನ್ನ ಮುಖವನ್ನು ಯಾರೂ ಮಿಕಮಿಕ ನೋಡೋದಿಲ್ಲ."

"ನನ್ನ ಮುಖವನ್ನು ತಾನೇ ಯಾರು ನೋಡ್ತಾರೆ? ನನ್ನ ಮುಖ ಒಂದು ಲೋಟಾದಂತಿದೆ" ಫೆಲ್ಲೋ ನಗತೊಡಗಿದಳು.

"ನೋಡಿಲ್ಲಿ, ಅಪರಿಚಿತರೆದುರು ಹೀಗೇ ನಗಬೇಡ. ಬುಟ್ಟಿಗಳ ಬದಲು ಅವರು..."

"ಹುಃ !" ಫೆಲ್ಲೋಳ ನಗೆಮುಖ ಇದ್ದಕ್ಕಿದ್ದಂತೆ ಗಂಭೀರವಾಯಿತು. ಅಪರಿಚಿತರೆದುರು ನನ್ನ ಹೆಗಲ ಮೇಲೆ ಮುಖದ ಬದಲಾದ ಒಂದು ಲೋಟಾ ಇದೆಯೋನೋ ಎಂಬಂತೆ ಅದು ಭಾವರಹಿತವಾಗಿ ಬಿಡುತ್ತದೆ. ಬುಟ್ಟಿ ಮಾರುವಾಗ ಗಿರಾಕಿಗಳೆದುರು ಯಾವಾಗಲೂ ನಗುತ್ತಿರು ಎಂದು ನನ್ನಮ್ಮ ಒತ್ತಾಯ ಮಾಡುತ್ತಲೇ ಇರುತ್ತಾರೆ."

ರತ್ನ ಫೆಲ್ಲೋಳ ಕೈಗಳಿಂದ ಬುಟ್ಟಿಗಳನ್ನು ಸೆಳೆದು ಕೊಂಡ. "ನೀನು ಬುಟ್ಟಿಗಳನ್ನು ಮಾರಲು ನಾನು ಬಿಡುವುದಿಲ್ಲ" ಎಂದ ಅವನು "ಹೋಗಿ ಎಲ್ಲಾದರೂ ಕುಳಿತುಕೋ" ಎಂದು ಒಂದು ಮುಚ್ಚಿದ ಅಂಗಡಿಯನ್ನು ತೋರಿಸಿ, "ನಾನು ಹೋಗಿ ಈ ಪತ್ರಿಕೆಗಳನ್ನು ಮಾರಬೇಕು. ಎಲ್ಲವನ್ನೂ ಮಾರಲು ಪ್ರಯತ್ನಿಸುತ್ತೆನೆ."

"ಅನಂತರ ಆ ಹಣದಿಂದ ನೀನು ನನ್ನ ಬುಟ್ಟಿಗಳನ್ನು ಕೊಂಡುಕೊಳ್ಳಿಯ. ರತ್ನ ಹೀಗೆ ನಾವು ಎಷ್ಟು ಕಾಲ ತಾನೇ ಮುಂದುವರಿಯಬಹುದು ? ಆ ಬುಟ್ಟಿಗಳನ್ನು ತೆಗೆದುಕೊಂಡು ಏನು ಮಾಡುತ್ತೀಯ ? ಅವುಗಳ ಉಪ್ಪಿನಕಾಯಿ ಹಾಕುತ್ತೀಯೇನು ?"

"ಹೌದು, ನಾನು ಅವುಗಳ ಉಪ್ಪಿನಕಾಯೇ ಹಾಕುತ್ತೇನೆ. ನೀನು ಎಚ್ಚರಿಕೆಯಿಂದ ಇಲ್ಲದಿದ್ದರೆ ಒಂದು ದಿನ ನಿನ್ನ ತಾಯಿ ಕೂಡ ನಿನ್ನ ಉಪ್ಪಿನಕಾಯೇ ಹಾಕಿಬಿಡ್ತಾಳೆ. ಬಸ್ ಬರ್‍ತಾ ಇದೆ. ನೀನು ಇಲ್ಲೇ ಇರು. ನಾನು ಬೇಗ ಬರ್ತೀನಿ."

ಬುಟ್ಟಿಗಳನ್ನು ಫೆಲ್ಲೋಗೆ ಹಿಂದಿರುಗಿಸಿ ರತ್ನ ಬರುತ್ತಿದ್ದ ಬಸ್ಸಿನ ದಿಕ್ಕಿನೆಡೆಗೆ ಧಾವಿಸಿದ. ರತ್ನನನ್ನು ಹಿಂಬಾಲಿಸಿ ಬಸ್ಸಿನ ಬಳಿ ಹೋಗಿ ತನ್ನ ಕೆಲವು ಬುಟ್ಟಿಗಳನ್ನು ಮಾರಲು ಪ್ರಯತ್ನಿಸಲೇ ಎಂದುಕೊಂಡಳು ಫೆಲ್ಲೋ. ಆದರೆ ಅವಳಿಂದ ರತ್ನನ ಆಜ್ಞೆಯನ್ನು ಉಲ್ಲಂಘಿಸುವುದು ಸಾಧ್ಯವಿರಲಿಲ್ಲ. ಆದ್ದರಿಂದ ಅವಳು ಬುಟ್ಟಿಗಳನ್ನು ಪಕ್ಕದಲ್ಲಿಟ್ಟು, ಅಂಗಡಿಯ ಜಗುಲಿಯ ಮೇಲೆ ತಟಸ್ಥಳಾಗಿ ಕುಳಿತುಕೊಂಡಳು.

"ತಾರಾಚಂದನೆಂಬ ಮನುಷ್ಯ ತನ್ನ ಹೆಂಡತಿಯ ಮೂಗನ್ನು ಕತ್ತಿಯಿಂದ ತುಂಡರಿಸಿದ್ದಾನೆ ! ಸುಂದರಿ ಸ್ತ್ರೀ. ಇಪ್ಪತ್ತೇ ವರ್ಷ ವಯಸ್ಸು! ಇಂದಿನ ಪತ್ರಿಕೆಯ ತಾಜಾ ಸುದ್ದಿ". ರತ್ನ ಪತ್ರಿಕೆಗಳನ್ನು ಮಾರುತ್ತಾ ಕೂಗುತ್ತಿರುವುದು ಫೆಲ್ಲೋಗೆ ಕೇಳಿಸಿತು. ಜನರು ಗುಂಪುಕಟ್ಟಿ ಉತ್ಸುಕತೆಯಿಂದ ಪತ್ರಿಕೆಗಳನ್ನು ಅವನಿಂದ ಕೊಂಡುಕೊಳ್ಳುತ್ತಿರುವುದನ್ನು ಅವಳು ನೋಡಿದಳು. ಅವಳು ನಕ್ಕುಬಿಟ್ಟಳು.

ರತ್ನ ಯಾವಾಗಲೂ ಹಾಗೇ ಮಾಡುತ್ತಿದ್ದ. ದಿನ ನಿತ್ಯದ ಸುದ್ದಿಯಿಂದ ಜನರ ಕುತೂಹಲ ಕೆರಳಿಸುವ ಯುಕ್ತಿ ಅವನಿಗೆ ತಿಳಿದಿತ್ತು...ಹೊಸ ವೈಜ್ಞಾನಿಕ ಸಂಶೋಧನೆ ! ಹೊಸ ರಷಿಯನ್ ರಾಕೆಟ್‌ಗಳು ! ದಲಾಯಿಲಾಮಾ ಬಗ್ಗೆ ಹೆಚ್ಚಿನ ಸಮಾಚಾರ !

ಬಸ್ಸಿನ ಚಾಲಕ ಹಾರ್ನಿನ ಸದ್ದು ಮಾಡಿದ. ಪ್ರಯಾಣಕರು ಮತ್ತೆ ಬಸ್ಸಿನೊಳಗೆ ನುಗ್ಗಿದರು. ಆಗ ಅವಳು ರತ್ನ ಬರುತ್ತಿರುವುದನ್ನು ನೋಡಿದಳು. "ಇಂದು ನಾನು ಎಲ್ಲಾ ಪತ್ರಿಕೆಗಳನ್ನೂ ಮೊದಲ ಎರಡು ಬಸ್ಸಿನ ಪ್ರಯಾಣಿಕರಿಗೇ ಮಾರಿಬಿಟ್ಟೆ" ಅವನು ಜಯಶೀಲನಾದ ಧ್ವನಿಯಲ್ಲಿ ಹೇಳಿದ.

"ಪ್ರತಿದಿನವೂ ಹೆಂಡತಿಯ ಮೂಗು ಕೊಯ್ದು ಗಂಡನ ಸುದ್ದಿ ಪತ್ರಿಕೆಯಲ್ಲಿ ಇರಬೇಕೆಂದು ನೀನು ಪ್ರಾರ್ಥಿಸುತ್ತಿರಬೇಕು", ಫೆಲ್ಲೋ ನುಡಿದಳು.

"ಹೌದು, ನನ್ನ ಚಾತುರ್ಯವನ್ನು ಒಬ್ಬ ಹೆಂಗಸಿನ ಮೂಗಿಗೆ ಹೊಂದಿಸಬೇಕಾಗಿದೆ ! "ರತ್ನ ನಕ್ಕ. ಒಂದು ದೊಡ್ಡ ಬಸ್ ಬಂದಿತು. ಎರಡು ಕಾರುಗಳೂ ಬಂದವು.

"ನಾನು ಹೋಗಿ ಮತ್ತೊಂದು ಸುತ್ತು ಹಾಕಿ ಬರುತ್ತೇನೆ." ರತ್ನ ಹೇಳಿದ.

"ನಾನೂ ಹೋಗಿ ನನ್ನ ಅದೃಷ್ಟ ಪರೀಕ್ಷಿಸುತ್ತೇನೆ" ಫೆಲ್ಲೋ ಹೇಳಿದಳು.

"ಬೇಡ, ಫೆಲ್ಲೋ, ನೀನು ಹೋಗಬೇಡ."

"ನಿನಗೆ ಹುಚ್ಚೇನು ! ನಾನು ಸೋಮಾರಿಯಾಗಿ ಕೈಮೇಲೆ ಕೈಯಿಟ್ಟುಕೊಂಡು ಇಲ್ಲಿ ಕುಳಿತುಕೊಂಡರೆ ಹೇಗೆ...."

"ನಾನಾಗಲೇ ಹೇಳಲಿಲ್ಲವೇನು ? ಫೆಲ್ಲೋ ನಾನು ನಿನ್ನ ಆರು ಬುಟ್ಟಿಗಳನ್ನು ಕೊಂಡುಕೊಳ್ತೇನೆ, ನನ್ನ ಚಿನ್ನಾರಿ" ರತ್ನ ಅವಳತ್ತ ಮುಖ ಮಾಡಿ ಅಣಗಿಸಿದ.

"ಇಲ್ಲ, ನಾನು ಹೋಗಬೇಕು. ಪ್ರತಿದಿನವೂ ಹೀಗೆ ಮುಂದುವರಿಯಲು ಸಾಧ್ಯವಿಲ್ಲ; ನನ್ನ ಅಪ್ಪ ಇಂದು ಇಪ್ಪತ್ತು ಬುಟ್ಟಿಗಳನ್ನು ಮಾರಬೇಕೆಂದು ಹೇಳಿದ್ದಾರ."

ರತ್ನ ಬಸ್ಸಿನತ್ತ ಧಾವಿಸಿದ. ಫೆಲ್ಲೋ ಕಾರುಗಳತ್ತ ಸಾಗಿದಳು.

ಅರ್ಧ ಸೇರು ಮಾಂಸ, ಬೆಳ್ಳುಳ್ಳಿ, ಈರುಳ್ಳಿ,ಹಸಿ ಶುಂಠಿ, ಹಸಿಮೆಣಸಿನಕಾಯಿ ಇವನ್ನೆಲ್ಲಾ ಅವಳು ಕೊಂಡುಕೊಳ್ಳುವಂತಿದ್ದರೆ ಎಷ್ಟು ಚೆನ್ನಾಗಿತ್ತು. ಅಪ್ಪ ಎಷ್ಟು ಖುಷಿ ಪಡುತ್ತಾರೆ. ಯಾರಾದರೂ ಬುಟ್ಟಿ ಕೊಂಡುಕೊಳ್ಳಬೇಕು ಎಂದಿರುವವರೂ ಅವಳ ಮುಖ ನೋಡಿ ಮನಸ್ಸು ಬದಲಾಯಿಸುತ್ತಾರೆ–ಫೆಲ್ಲೋಳ

ಮನಸ್ಸಿನಲ್ಲಿ ಈ ಪದಗಳು ಪ್ರತಿಧ್ವನಿಸಿದವು.

ಅವಳು ಕಾರಿನಲ್ಲಿ ಕುಳಿತಿದ್ದ ವ್ಯಕ್ತಿಯತ್ತ ದಿಟ್ಟಿಸಿ ತನ್ನ ಮುಖ ಅವನಿಗೆ ಲೋಟಾದಂತೆ ಕಾಣಸದಿರಲಿ ಎಂದು ಆಶಿಸಿದಳು.

"ಸುಂದರವಾದ ಬುಟ್ಟಿಗಳು ಬಾಬೂ."

"ಯಾವ ಬುಟ್ಟಿಗಳ ಬಗ್ಗೆ ಹೇಳುತ್ತಿದ್ದೀಯಾ?" ಕಾರಿನಲ್ಲಿದ್ದ ಮನುಷ್ಯ ಫೆಲ್ಲೋಳನ್ನು ವಿಚಿತ್ರವಾಗಿ ನೋಡಿದ. "ತಾಳು, ಈಗ ನನಗೆ ಬೇಕಾಗಿರೋದು ಸೋಡಾ, ಬುಟ್ಟಿಗಳಲ್ಲ. ಹೋಗಿ ಆ ಅಂಗಡಿಯಿಂದ ನನಗೆ ಸೋಡಾ ಮತ್ತು ಐಸ್ ತಂದುಕೊಡು."

"ಸೋಡಾ ಮತ್ತು ಐಸ್ !" ಫೆಲ್ಲೋ ಅಂಗಡಿಯವನಿಗೆ ದೊಡ್ಡ ದನಿಯಲ್ಲಿ ಕೂಗಿ ಹೇಳಿದಳು. ಅನಂತರ ಕಾರಿನ ಬಳಿಸಾರಿದಳು, "ಚಂದವಾದ ಬುಟ್ಟಿಗಳು, ಬಾಬೂ."

ಕಾರಿನಲ್ಲಿದ್ದಾತ ಬುಟ್ಟಿಗಳನ್ನು ನಿರ್ಲಕ್ಷಿಸಿದ. ಅವನು ಫೆಲ್ಲೋಳನ್ನೇಮೆಚ್ಚುಗೆಯಿಂದ ದಿಟ್ಟಿಸಿ ಹೇಳಿದ, "ಹೌದು, ತುಂಬಾ ಸುಂದರವಾದ ಬುಟ್ಟಿಗಳು."

"ಹಾಗಿದ್ದರೆ ಅವುಗಳನ್ನೇಕೆ ಕೊಳ್ಳಬಾರದು ? ಒಂದೊಂದಕ್ಕೆ ಬರೇ ಆರಾಣೆ ಅಷ್ಟೇ" ಅವಳು ಹೇಳಿದಳು ಲೋಟಾದಂಥ ಭಾವ ತನ್ನ ಮೊಗದ ಮೇಲೆ ಕಾಣಸಬಾರದೆಂದು ಪ್ರಯತ್ನಿಸಿದಳು.

ಅಂಗಡಿ ಹುಡುಗ ಸೋಡಾ ಮತ್ತು ಐಸ್ ತೆಗೆದುಕೊಂಡ ಬಂದ. ಕಾರಿನಲ್ಲಿದ್ದಾತ ಒಂದು ಬ್ಯಾಸ್ಕೆಟ್ ತೆರೆದು, ಅದರೊಳಗಿನ ಮದ್ಯದ ಶೀಶೆಯನ್ನು ಹೊರತೆಗೆದು ಅದರಲ್ಲಿದ್ದುದರಲ್ಲಿ ಸ್ವಲ್ಪವನ್ನು ಒಂದು ಗ್ಲಾಸಿಗೆ ಬಗ್ಗಿಸಿದ.

ಮದ್ಯವನ್ನು ಹೀರುತ್ತಾ ಅವನು ಫೆಲ್ಲೋಳ ಕಡೆ ತಿರುಗಿದ. "ಒಂದೊಂದಕ್ಕೆ ಬರೇ ಆರಾಣೆ ಅಷ್ಟೇಯೇ?" ಅವನು ಕೇಳಿದ.

"ಹೌದು ಬಾಬೂ ; ಆರಾಣೆ ಮಾತ್ರವೆ. ನೀವು ಎರಡು ಕೊಂಡರೆ ನಾನು ಹತ್ತಾಣೆ ಮಾಡಿಕೊಡುತ್ತೇನೆ."

"ನಾನು ನಾಲ್ಕು ಕೊಂಡರೆ ?"

"ನಾಲ್ಕು !" ಫೆಲ್ಲೋ ತನ್ನ ಬೆರಳುಗಳನ್ನು ಎಣಿಸತೊಡಗಿದಳು. ಎಣಿಸುವಾಗ ಕರ್ತಾರೋ ಹೇಳಿದ್ದು ನಿಜವೇ ಇರಬೇಕು ಎನ್ನಿಸಿತವಳಿಗೆ. ಅವಳು ನಗೆಬೀರಿದರೆ ಜನರು ಅವಳ ಬುಟ್ಟಿಗಳನ್ನು ಅನಾಯಾಸವಾಗಿ ಕೊಳ್ಳುತ್ತಾರೆ.

ಕಾರಿನಲ್ಲಿದ್ದಾತ ತನ್ನ ಗ್ಲಾಸನ್ನು ಖಾಲಿ ಮಾಡಿದ್ದ, ಗ್ಲಾಸನ್ನೂ, ಹಣವನ್ನು ಹುಡುಗನಿಗೆ ಹಿಂದಿರುಗಿಸಿ ಅವನು ಎಂಜಿನನ್ನು ಶುರುಮಾಡಿದ.

"ಬಾಬೂ, ಬುಟ್ಟಿ ?" ಫೆಲ್ಲೋಗೆ ಆಶೆ ಕಮರತೊಡಗಿತ್ತು.

"ಬುಟ್ಟಿಗಳನ್ನೇನೋ ನಾನು ಕೊಳ್ಳಬಲ್ಲೆ. ಆದರೆ ನನ್ನ ಬಳಿ ಚಿಲ್ಲರೆ ಇಲ್ಲವಲ್ಲ."

"ಆ ಅಂಗಡಿಯಲ್ಲಿ ನೋಟನ್ನು ಕೊಟ್ಟು ಚಿಲ್ಲರೆ ತರುತ್ತೇನೆ" ಅವಳು ಹೇಳಿದಳು.

"ಆ ಪುಟ್ಟ ಅಂಗಡಿಯಲ್ಲಿ ನನ್ನ ನೋಟಿಗೆ ಚಿಲ್ಲರೆ ಸಿಗುವುದಿಲ್ಲ. ನನ್ನ ಬಳಿ ನೂರು ರೂಪಾಯಿ ನೋಟುಗಳು ಮಾತ್ರ ಇವೆ."

ಹತಾಶಳಾದ ಫೆಲ್ಲೋ ಕಾರಿನ ಕಿಟಕಿಯ ಮೇಲಿಂದ ತನ್ನ ಕೈ ತೆಗೆದಳು.

"ಆದರೆ ಹೀಗೆ ಮಾಡಬಹುದು" ಕಾರಿನಲ್ಲಿದ್ದಾತ ಬಹುವಾಗಿ ಚಿಂತಿಸಿದಂತೆ ಮಾಡಿ, ಹೇಳಿದ. ಫೆಲ್ಲೋಳ ಆಶೆ ಮತ್ತೊಮ್ಮೆ ಪಲ್ಲವಿಸಿತು.

"ಇಲ್ಲಿಂದ ಸ್ವಲ್ಪ ದೂರದಲ್ಲಿ ಒಂದು ದೊಡ್ಡ ಪೆಟ್ರೋಲ್ ಬಂಕ್ ಇದೆ. ಅಲ್ಲಿ ನಾನು ಪೆಟ್ರೋಲ್ ಹಾಕಿಸಿಳ್ಳುತ್ತೇನೆ. ಅಲ್ಲಿ ನಾನು ಚಿಲ್ಲರೆ ಮಾಡಿಸಿ ಕೊಡುತ್ತೇನೆ."

"ಆದರೆ ನಂಗೆ ಆ ಸ್ಥಳ ಗೊತ್ತಿಲ್ಲವಲ್ಲ. ಅದು ಇಲ್ಲಿಂದ ಬಹಳ ದೂರ ಇರಬಹುದು."

"ನಿನ್ನನ್ನು ನನ್ನ ಕಾರಿನಲ್ಲೇ ಕರೆದೊಯ್ಯುತ್ತೇನೆ. ಇವು ಬಹಳ ಸುಂದರವಾದ ಬುಟ್ಟಿಗಳು ಅಷ್ಟನ್ನೂ ನಾನೇ ಕೊಂಡುಕೊಳ್ಳುತ್ತೇನೆ" ಆತ ಫೆಲ್ಲೋಳಿಗಾಗಿ ಕಾರಿನ ಬಾಗಿಲು ತೆರೆದ.

ಫೆಲ್ಲೋ ಅನುಮಾನಿಸಿದಳು. ಆಗ ಅವಳಿಗೆ ತನ್ನ ತಂದೆ ತನ್ನ ಕೈ ಬಿಡಬಾರದೆಂದೂ, ಕೊನೇ ಪಕ್ಷ ಇಪ್ಪತ್ತು ಬುಟ್ಟಿಗಳಾದರೂ ಮಾರಬೇಕೆಂದು ಹೇಳಿದ್ದು ನೆನಪಾಯಿತು. ಅವಳು ಬೇಗನೇ ಕಾರನ್ನು ಹತ್ತಿ ಕುಳಿತಳು.

ಕಾರು ವೇಗದಿಂದ ಸಾಗಿತ್ತು. ಮತ್ತೂ ವೇಗದಿಂದ ಸಾಗಿತ್ತು. ಅನಂತರ ಅದು ಟಾರು ಹಾಸಿದ

ಹೆದ್ದಾರಿಯನ್ನು ಬಿಟ್ಟು ಕಚ್ಚಾ ರಸ್ತೆಯೊಂದರಲ್ಲಿ ಓಡ ತೊಡಗಿತು.

"ಬಾಬೂ, ಪೆಟ್ರೋಲ್ ಬಂಕ್ ಎಲ್ಲಿದೆ?" ಫೆಲ್ಲೋ ಹೆದರಿದ್ದಳು. ಆ ಮನುಷ್ಯ ಅವಳನ್ನು ತನ್ನ ತೋಳುಗಳಲ್ಲಿ ಸೆಳೆದುಕೊಂಡಾಗ ಅವಳಿಗೆ ಉಸಿರು ಗಟ್ಟಿದ ಅನುಭವವಾಯಿತು. ಅವಳ ತಲೆ ಗಿರ್ರನೆ ಸುತ್ತಿತ್ತು. ಆ ಮನುಷ್ಯನ ಆಲಿಂಗನವನ್ನು ಬಿಡಿಸಿ ಕೊಳ್ಳಲು ಹೋರಾಡಿದ ಕೈಗಳು ಪ್ರತಿಭಟನೆಯನ್ನು ಬಿಟ್ಟು ನಿಷ್ಕ್ರಿಯವಾದವು.

ಫೆಲ್ಲೋಗೆ ಎಚ್ಚರವಾದಾಗ ತಾನು ಅಸ್ತವ್ಯಸ್ತ ಳಾಗಿ ಮರವೊಂದರ ಕೆಳಗೆ ಬಿದ್ದುಕೊಂಡಿರುವುದು ತಿಳಿಯಿತು. ಅಲ್ಲಿ ಕಾರೂ ಇರಲಿಲ್ಲ; ಬಾಬೂ ಕೂಡ ಇರಲಿಲ್ಲ. ಫೆಲ್ಲೋ ತನ್ನ ಉಡುಪನ್ನು ನೋಡಿ ಕೊಂಡಳು. ನಂತರ ತನ್ನ ಎದುರಿಗೆ ಕಸದಂತೆ ಬಿದ್ದಿದ್ದ ಬುಟ್ಟಿಗಳನ್ನು ನೋಡಿದಳು. ಎಲ್ಲವೂ ಧೂಳಿನಿಂದ ಅವೃತ್ತವಾಗಿದ್ದವು.

ಬುಟ್ಟಿಗಳನ್ನು ಎತ್ತುವುದೇ ಅವಳಿಗೆ ಪ್ರಯಾಸ ವಾಗಿತ್ತು. ಒಂದೊಂದು ಮಣದಷ್ಟು ಭಾರವೆನಿಸಿದ ಕಾಲುಗಳನ್ನು ಎಳೆದು ಹಾಕುತ್ತಾ ಅವಳು ಕಚ್ಚಾರಸ್ತೆ ಯನ್ನು ಹಾದು ಟಾರ್ ರಸ್ತೆಯ ಹೆದ್ದಾರಿಗೆ ಬಂದಳು. ಬಸ್ಸೊಂದು ಅವಳ ಪಕ್ಕ ಬಂದು ನಿಂತಿತು. "ಕರ್ನಾಲ್" ಕಂಡಕ್ಟರ್ ಅವಳನ್ನು ಕೇಳಿದ. "ಹೌದು" ಅವಳು ತಲೆಯಾಡಿಸಿದಳು. ಕಂಡಕ್ಟರ್ ಅವಳನ್ನು ಟಿಕೇಟಿನ ಹಣ ಕೇಳಿದಾಗ ಅವಳು ಬೆಚ್ಚಿದಳು. ಕೊಡಲು ಅವಳ ಬಳಿ ಹಣ ಇರಲೇ ಇಲ್ಲ. ತನ್ನ ಜೋಬಿನಲ್ಲಿ ನಾಲ್ಕಾಣೆ ಇರುವುದು ಅವಳಿಗೆ ನೆನಪಾಯಿತು. ಅವಳು ಜೋಬಿ ನಲ್ಲಿ ತಡಕಿದಳು. ನಾಲ್ಕಾಣೆ ಸಿಗಲಿಲ್ಲ. ಅದರ ಬದಲಿಗೆ ಅವಳಿಗೆ ಒಂದು ಹೊಚ್ಚ ಹೊಸ ಹತ್ತು ರೂಪಾಯಿ ನೋಟು ಸಿಕ್ಕಿತು.

ಫೆಲ್ಲೋಗೆ ಓಡುವ ಬಸ್ಸಿನಿಂದ ಧುಮುಕಿ ಆತ್ಮ ಹತ್ಯೆ ಮಾಡಿಕೊಳ್ಳಬೇಕೆನಿಸಿತು. ಆ ನೋಟನ್ನು ಹರಿಯಬೇಕು ಎಂದುಕೊಂಡಳು.

ಯೋಚನಾಮಗ್ನಳಾದ ಹುಡುಗಿಯನ್ನು ನೋಡಿ ಕಂಡಕ್ಟರ್ ಅವಳ ಕೈಯಿಂದ ಆ ನೋಟನ್ನು ತೆಗೆದು ಕೊಂಡು ಹೇಳಿದ, "ಟಿಕೆಟ್ಟಿನ ದುಡ್ಡು ಬರೇ ಐದಾಣೆ ಮಾತ್ರ. ನಿನ್ನ ನೋಟಿಗೆ ಚಿಲ್ಲರೆ ಕೊಡುವಷ್ಟು ಹಣ ನನ್ನಲ್ಲಿದೆ." ಅವನು ಚಿಲ್ಲರೆ ಕೊಟ್ಟಾಗ ಅವಳು ಎಣಿಸದೆ ತನ್ನ ಜೇಬಿನಲ್ಲಿ ಹಾಕಿಕೊಂಡಳು.

"ನಿನ್ನ ಹಣ ಎಣಿಸಿಕೊಳ್ಳುವುದು ಒಳ್ಳೆಯದು" ಕಂಡಕ್ಟರ್ ಹೇಳಿದ. ಆದರೆ ಫೆಲ್ಲೋ ಅಷ್ಟರಲ್ಲೇ ತೂಕಡಿಸಿದಳು.

ಕರ್ನಾಲ್ ಬಸ್‌ನಿಲ್ದಾಣದಲ್ಲಿ ಬಸ್ ನಿಂತಿತು. ಫೆಲ್ಲೋ ಮನಸ್ಸಿಲದ ಮನಸ್ಸಿನಿಂದ ಮನೆಯ ಕಡೆ ಹೆಜ್ಜೆ ಹಾಕಿದಳು.

ಅವಳ ಗಲ್ಲಿಯ ತಿರುವಿನಲ್ಲೇ ಮಾಂಸದ ಅಂಗಡಿ ಇತ್ತು. "ಅರ್ಧ ಸೇರು ಮಾಂಸ ಕೊಡಿ" ಅವಳು ಕ್ಷೀಣ ದನಿಯಲ್ಲಿ ಹೇಳಿ ತನ್ನ ಜೇಬಿನಿಂದ ಹಣ ತೆಗೆದಳು.

ಫೆಲ್ಲೋ ಮಾಂಸ ಮತ್ತಿತರ ಪದಾರ್ಥಗಳನ್ನು ಅಡುಗೆ ಮನೆಯ ಮಾಡದಲ್ಲಿ ಇರಿಸಿದಾಗ ಅವಳ ತಾಯಿ ಪ್ರಫುಲ್ಲಚಿತ್ತಳಾಗಿದ್ದಳು.

"ಇವತ್ತು ನೀನು ಎಷ್ಟು ಬುಟ್ಟಿಗಳನ್ನು ಮಾರಿದೆ" ಎಂದವಳು ಪ್ರಶ್ನಿಸಿದಳು.

"ಎಲ್ಲವನ್ನೂ ಮಾರಿದೆ" ಎಂದು ಉತ್ತರಿಸಿದ ಫೆಲ್ಲೋ ಸ್ನಾನ ಮಾಡಲು ಬಕೆಟಿನಲ್ಲಿ ನೀರು ತುಂಬ ತೊಡಗಿದಳು.

"ಆ ರತ್ನ ಬಂದಿದ್ದ. ನಿನ್ನನ್ನು ಕೇಳುತ್ತಿದ್ದ."

"ಓ ಹಾಗೇನು?" ಎಂದ ಫೆಲ್ಲೋ ತಟ್ಟನೆ ಮೌನವಹಿಸಿದಳು. ಬಾಗಿಲು ಮುಚ್ಚಿ ಸ್ನಾನ ಮಾಡ ತೊಡಗಿದಳು. ಹೊರಬಂದಾಗ ಕರ್ತಾರನೋ ಮಾಂಸ ವನ್ನು ಹುರಿಯುತ್ತಿರುವುದನ್ನು ಕಂಡಳು....

"ಮಾಂಸದ ವಾಸನೆ ಬರುತ್ತಿದೆ!" ಫೆಲ್ಲೋಳ ತಂದೆ ಹೇಳಿದ. "ಮನೆ ಮತ್ತೆ ಸಮೃದ್ಧವಾಗಿ ಇರು ವಂತೆ ಅನಿಸುತ್ತದೆ. ಹುರಿದ ವಾಸನೆ ಇಲ್ಲದ ಮನೆ ಮನೆಯೇ ಅಲ್ಲ. ಬೇಕಾದ್ರೆ ಬರೆದಿಟ್ಟುಕೋ." ಅನಂತರ ಅವನು ಫೆಲ್ಲೋಳತ್ತ ಪ್ರೇಮದಿಂದ ನೋಡಿದ "ಫೆಲ್ಲೋ, ನನ್ನ ಚಿನ್ನಾರೆ" ಒಲೆಯ ಮೇಲಿದ್ದ ಪಾತ್ರೆಯ ಕಡೆ ನೋಡಿದ ಫೆಲ್ಲೋಗೆ ಪಾತ್ರೆಯಲ್ಲಿ ತನ್ನ ನಗೆಯನ್ನು ಹುರಿಯುತ್ತಾ ಇದ್ದಾರೇನೋ ಎನಿಸಿತು.

# ಈಗ ನೀವು ವರದಕ್ಷಿಣೆ ನಿರ್ಮೂಲನ ತ್ವರಿತಗೊಳಿಸಬಹುದು

**ವರದಕ್ಷಿಣೆ ನಿಷೇಧ (ತಿದ್ದುಪಡಿ) ಕಾಯಿದೆ, 1984. ಅಕ್ಟೋಬರ್ 2, 1985 ರಿಂದ ಜಾರಿಗೆ ಬಂದಿದೆ**

ಹೌದು, ಈಗ ವರದಕ್ಷಿಣೆಯನ್ನು ನಿರ್ಮೂಲಗೊಳಿಸುವಂತಹ ಅವಕಾಶವನ್ನು ಕಲ್ಪಿಸಲಾಗಿದೆ. ವರದಕ್ಷಿಣೆ ನಿಷೇಧ ಕಾಯಿದೆಯ ಹೊಸ ತಿದ್ದುಪಡಿ ಈಗ ಜಾರಿಗೆ ಬಂದಿದೆ. ಈ ಕಾನೂನು ಉಲ್ಲಂಘಿಸುವವರು ಯಾವುದೇ ಧರ್ಮಕ್ಕೆ ಸೇರಿದವರಾದರೂ ಅವರ ಮೇಲೆ ಪರಿಣಾಮಕಾರಿಯಾಗಿ ಕಾನೂನು ಕ್ರಮ ತೆಗೆದುಕೊಳ್ಳಬಹುದಾಗಿದೆ.

ಈ ಹೊಸ ತಿದ್ದುಪಡಿಯ ವಿಶೇಷ ಅಂಶಗಳು :—

ಮದುವೆಗೆ ಸಂಬಂಧಿಸಿದಂತೆ ವಧುವಿಗೆ ಅಥವಾ ವರನಿಗೆ ಅಥವಾ ಇತರ ಯಾವುದೇ ವ್ಯಕ್ತಿಗೆ ಕೊಡುವ ಅಥವಾ ಕೊಡುವುದಾಗಿ ಹೇಳುವ ಯಾವುದೇ ಆಸ್ತಿ ಅಥವಾ ಬೆಲೆಬಾಳುವ ವಸ್ತುಗಳನ್ನು ವರದಕ್ಷಿಣೆ ಎಂದು ಪರಿಗಣಿಸಲಾಗುವುದು.

ವಧು ಅಥವಾ ವರನ ತಂದೆ ತಾಯಿಗಳು, ಸಂಬಂಧಿಕರು ಅಥವಾ ಪೋಷಕರು ನೇರವಾಗಿ ಅಥವಾ ಬೇರೆ ಯವರ ಮೂಲಕ ವರದಕ್ಷಿಣೆ ಬೇಕೆಂದು ಕೇಳುವುದು, ತೆಗೆದುಕೊಳ್ಳುವುದು, ಕೊಡುವುದು ಅಥವಾ ಒತ್ತಾಯಿಸು ವುದು ಶಿಕ್ಷಾರ್ಹ ಅಪರಾಧ. ಈ ಅಪರಾಧಕ್ಕೆ ಆರು ತಿಂಗಳಿನಿಂದ ಎರಡು ವರ್ಷಗಳವರೆಗಿನ ಸೆರೆವಾಸ ಮತ್ತು 10,000 ರೂ.ಗಳವರೆಗೆ ಅಥವಾ ವರದಕ್ಷಿಣೆ ಬೆಲೆಯಷ್ಟು—ಯಾವುದು ಹೆಚ್ಚೋ ಅಷ್ಟು ಮೊತ್ತದವರೆಗಿನ ಜುಲ್ಮಾನೆ.

ವಿವಾಹದ ಸಂದರ್ಭದಲ್ಲಿ ವಧು ಹಾಗೂ ವರನಿಗೆ ನೀಡುವ ಉಡುಗೊರೆಗಳು ಯಾವುದೇ ಬಗೆಯ ಒತ್ತಾಯವಿಲ್ಲದೆ, ಸಾಂಪ್ರದಾಯಕ ರೀತಿಯಲ್ಲಿದ್ದು ನಿಬಂಧನೆಗಳಂತೆ ಪಟ್ಟಿ ಮಾಡಿದ್ದಲ್ಲಿ ಶಿಕ್ಷೆ ಇಲ್ಲ. ಲಿಖಿತ ರೂಪದ ಈ ಪಟ್ಟಿಯನ್ನು ವಧು—ವರ ಇಬ್ಬರೂ ಇಟ್ಟುಕೊಳ್ಳಬೇಕು. ಪಟ್ಟಿಯಲ್ಲಿ ಉಡುಗೊರೆಯ ವಿವರಣೆ, ಅದರ ಅಂದಾಜು ಬೆಲೆ, ಉಡುಗೊರೆ ನೀಡಿದ ವ್ಯಕ್ತಿಯ ಹೆಸರು, ಆ ವ್ಯಕ್ತಿಗೂ ವಧು—ವರರಿಗಿರುವ ಸಂಬಂಧ ಮುಂತಾದವುಗಳನ್ನು ಬರೆದಿಡಬೇಕು. ಅಕ್ಷರ ಬಾರದವರು ಇಂತಹ ಪಟ್ಟಿಯನ್ನು ಬರೆಸಿ, ಓದಿ ಹೇಳಿದ ನಂತರ ಹೆಬ್ಬೆಟ್ಟು ಗುರುತನ್ನು ಹಾಕಬೇಕು.

ಉಡುಗೊರೆ ತೆಗೆದುಕೊಂಡ ವಸ್ತುಗಳ ಇಂತಹ ಪಟ್ಟಿಯನ್ನು ಬರೆದಿರದಿದ್ದಲ್ಲಿ ಅಥವಾ ಮದುವೆಯ ಸಂದರ್ಭದಲ್ಲಿ ತೆಗೆದುಕೊಳ್ಳಲಾದ ಯಾವುದಾದರೂ ಉಡುಗೊರೆಯನ್ನು ಆ ಪಟ್ಟಿಯಲ್ಲಿ ಸೇರಿಸದಿದ್ದಲ್ಲಿ ಉಡುಗೊರೆ ಅಥವ ಉಡುಗೊರೆಗಳನ್ನು ಪಡೆಯುವ ಮತ್ತು ನೀಡುವ ವ್ಯಕ್ತಿ ಹಾಗೂ ವ್ಯಕ್ತಿಗಳನ್ನು ಶಿಕ್ಷೆಗೆ ಗುರಿಪಡಿಸಲಾಗಿದೆ.

ಒಬ್ಬ ಮಹಿಳೆಯ ಮದುವೆಯಲ್ಲಿ ನೀಡಲಾದ ವರದಕ್ಷಿಣೆಯನ್ನು ಆ ಮಹಿಳೆಯಲ್ಲದೆ ಬೇರೆ ಯಾರಾದರೂ ಸ್ವೀಕರಿಸಿದರೆ, ಅವರು ಮೂರು ತಿಂಗಳ ಒಳಗಾಗಿ ಆ ಮಹಿಳೆಗೇ ಹಿಂತಿರುಗಿಸಬೇಕು. ಹಾಗೆ ತಲುಪಿಸದಿದ್ದಲ್ಲಿ ಆ ವ್ಯಕ್ತಿ ಆರು ತಿಂಗಳಿಂದ ಎರಡು ವರ್ಷದವರೆಗೆ ಸೆರೆವಾಸ ಅಥವಾ 10,000 ರೂ ದಂಡ ಇಲ್ಲವೇ, ಎರಡೂ ಶಿಕ್ಷೆಗಳಿಗೆ ಒಳಗಾಗುತ್ತಾನೆ.

ಈ ನಿಯಮಗಳನ್ನು ಮೀರಿದ ಸಂದರ್ಭಗಳಲ್ಲಿ ನೊಂದ ವ್ಯಕ್ತಿ, ಆ ವ್ಯಕ್ತಿಯ ತಂದೆ ತಾಯಿ, ಆ ವ್ಯಕ್ತಿಯ ಸಂಬಂಧಿ, ಪೋಲೀಸರು ಅಥವಾ ಸರ್ಕಾರದಿಂದ ಮಾನ್ಯತೆ ಹೊಂದಿದ ಸಮಾಜ ಕಲ್ಯಾಣ ಸಂಸ್ಥೆ-ಇವರಲ್ಲಿ ಯಾರು ಬೇಕಾದರೂ ದೂರು ಸಲ್ಲಿಸಬಹುದು. ವರದಕ್ಷಿಣೆಯ ನಿರ್ಮೂಲನಕ್ಕಾಗಿ ಧಾರ್ಮಿಕ ನಾಯಕರ ಹಾಗೂ ಸ್ವಯಂ ಸೇವಾ ಸಂಸ್ಥೆಗಳ ಬೆಂಬಲವನ್ನು ಸರ್ಕಾರ ಒಟ್ಟುಗೂಡಿಸುತ್ತಿದೆ. ನೊಂದ ವ್ಯಕ್ತಿಗೆ ಪೊಲೀಸರು ರಕ್ಷಣೆ ನೀಡುವರು,

ಕರ್ನಾಟಕ ಕಾನೂನು ನೆರವು ಮಂಡಲಿ ಉಚಿತ ಕಾನೂನು ನೆರವನ್ನೂ ನೀಡುವುದು.

ನೀವು ಮನಸ್ಸು ಮಾಡಿದರೆ ಈಗ ವರದಕ್ಷಿಣೆ ಪಿಡುಗನ್ನು ನಿರ್ಮೂಲಗೊಳಿಸಬಹುದು.

**'ಕರ್ನಾಟಕ ವಾರ್ತೆ'**

# ಯಂತ್ರಗಳ ಬಾಹುಗಳಿಂದ :
# ರಫ್ತು ಪ್ರಾಮುಖ್ಯ ನೀತಿಯುಳ್ಳ
# ಭಾರತದ ಉಡುಪು ಕಾರ್ಖಾನೆ ಹಾಗೂ ಮಹಿಳಾ ಕಾರ್ಮಿಕರು

ಅತ್ಯಂತ 'ಅಗ್ಗತನ', 'ಸುಲಭ ದಕ್ಕುವಿಕೆ' ಹಾಗೂ ಬೇಡವಾದಾಗ ಸುಲಭವಾಗಿ 'ಹೊರದೂಡಬಹುದಾದ' ಮೂರನೇ ಜಗತ್ತಿನ ಶ್ರಮ ಶಕ್ತಿಯ ಕೆಲವು-ಅಂಶಗಳು ಜಗತ್ತಿನ ಬಂಡವಾಳಶಾಹಿ ಬೆಳವಣಿಗೆಗೆ ಪೂರಕವಾಗಿವೆ. ಅಂದರೆ, ಉತ್ಪಾದನಾ ಸ್ಥಳವನ್ನು ಜಗತ್ತಿನಾದ್ಯಂತ ಹರಡುವಲ್ಲಿ, ಮರುಹುಟ್ಟು ಹಾಕುವಲ್ಲಿ ಸಾಧ್ಯತೆಗಳಾಗಿ ಪರಿಣಮಿಸಿದವು.

ಎಪ್ಪತ್ತರ ದಶಕದಿಂದ ರಫ್ತು ಹೆಚ್ಚಳಿಕೆಯ ಉದ್ದೇಶ ಭಾರತದ ಆರ್ಥಿಕ ಪ್ರಮುಖ ನೀತಿಗಳಲ್ಲಿ ಒಂದಾಗಿದೆ. ಈ ನೀತಿಯಿಂದಾಗಿ ರಫ್ತು ಪ್ರಾಮುಖ್ಯತೆ ಉಳ್ಳ ಉಡುಪಿನ ಅನೇಕ ಸಣ್ಣ ಕಾರ್ಖಾನೆಗಳ ಬೆಳವಣಿಗೆ ಭಾರತದ ಎಲ್ಲೆಡೆಗೆ ಕಂಡುಬಂದಿದೆ. ಉದಾಹರಣೆಗೆ 1969-70 ರಲ್ಲಿ ಮಿಲ್‌ಗಳಲ್ಲಿ ಉತ್ಪಾದಿತವಾದ ಉಡುಪುಗಳ ಮೌಲ್ಯ ರೂಗಳು ಆರು ಕೋಟಿ ಇದ್ದು, 1978-79ರಲ್ಲಿ 324 ಕೋಟಿಗಳಷ್ಟು ಹೆಚ್ಚಾಗಿದೆ. ಇದರಿಂದಾಗಿ 70ರ ದಶಕ ಭಾರತದಲ್ಲಿ ಸಂಪ್ರದಾಯ ಬದ್ಧವಾಗಿ ಇರದಂತಹ ರಫ್ತು ಪ್ರಾಮುಖ್ಯ ಉಳ್ಳ ಇಂಜನಿಯರಿಂಗ್ ಹಾಗೂ ಉಡುಪುಗಳ ಸಣ್ಣ ಕಾರ್ಖಾನೆಗಳ ಉದಯವನ್ನು ಕಂಡಿತು. [ನಿರ್ಮಲ ಬ್ಯಾನರ್ಜಿ 1977; ಕಲ್ಪಗಂ, ಯು. 1981 ಸುಮಿತ್ರ ಚಿಸ್ತಿ, 1981 : ವಿ. ರುಕ್ಮಿಣಿ ರಾವ್, ಸಭಾ ಹುಸೇನ್ 1984]

ಭಾರತದಲ್ಲಿ ಹೆಚ್ಚಳಿಕೆಯಾದ ಉಡುಪಿನ ರಫ್ತು ನೀತಿಗಳನ್ನು ಒಟ್ಟು ಪ್ರಪಂಚದ ಬಂಡವಾಳಶಾಹಿತ್ವದ ಬೆಳವಣಿಗೆಯ ಹಿನ್ನಲೆಯಲ್ಲಿ ಗುರುತಿಸುವುದು ಅಗತ್ಯವಾಗುತ್ತದೆ. ಅತ್ಯಂತ 'ಅಗ್ಗತನ', 'ಸುಲಭ ದಕ್ಕುವಿಕೆ ಹಾಗೂ ಬೇಡವಾದಾಗ ಸುಲಭವಾಗಿ 'ಹೊರದೂಡಬಹುದಾದ' ಮೂರನೇ ಜಗತ್ತಿನ ಶ್ರಮಶಕ್ತಿಯ ಕೆಲವು ಅಂಶಗಳು - ಜಗತ್ತಿನ ಬಂಡವಾಳಶಾಹಿತ್ವದ ಬೆಳವಣಿಗೆಗೆ ಪೂರಕವಾಗಿವೆ. ಅಂದರೆ, ಉತ್ಪಾದನಾ ಸ್ಥಳವನ್ನು ಜಗತ್ತಿನಾದ್ಯಂತ ಹರಡುವಲ್ಲಿ, ಮರುಹುಟ್ಟು ಹಾಕುವಲ್ಲಿ ಸಾಧ್ಯತೆಗಳಾಗಿ ಪರಿಣಮಿಸಿದವು. ಮೇಲ್ಕಂಡ ಅಂಶಗಳ ಜೊತೆಗೆ ಉತ್ಪಾದನೆಯ ಹಂತವನ್ನು ವಿಭಜನೆ ಹಾಗೂ ಮರು-ವಿಭಜನೆಗೊಳಿಸುವುದು, ಒಟ್ಟು ಉತ್ಪಾದನಾ ವ್ಯವಸ್ಥೆಯನ್ನು ಪ್ರತ್ಯೇಕವಾಗಿಸುವುದು, ಹಾಗೂ ಬದಲಾವಣೆಯ ಹಂತದಲ್ಲಿ ಬಂಡವಾಳಶಾಹಿತ್ವದ ಸೂಕ್ಷ್ಮ ಅಂಶಗಳು ಉತ್ಪಾದನೆಯ ಸ್ಥಳವನ್ನು ಜಗತ್ತಿನಾದ್ಯಂತ ಪ್ರತ್ಯೇಕ – ಪ್ರತ್ಯೇಕವಾಗಿ ಹರಡುವಲ್ಲಿ ಸಮರ್ಥವಾದವು, ಹಾಗೂ ಮರುಸೃಷ್ಟಿಗೊಂಡ ಉತ್ಪಾದನಾ ಸ್ಥಳಗಳು - ಹದಿನಾರರಿಂದ - ಇಪ್ಪತ್ತೈದು ವರ್ಷ ಒಳಗಿನ ಸಾವಿರಾರು ಯುವತಿಯರನ್ನು ಕಾರ್ಖಾನೆಯ ಉತ್ಪಾದನೆಯ ಬಾಹುಗಳೊಳಗೆ ಸೆಳೆದುಕೊಂಡವು.

ಲಿಂಗ - ಪ್ರತ್ಯೇಕವಾದಂತಹ ಏಕತಾನ ಕೆಲಸಗಳಲ್ಲಿ ಯುವತಿಯ ಭಾಗವಹಿಸುವಿಕೆ, ಕಡಿಮೆ ವೇತನ, ಹೆಚ್ಚು ಗಂಟೆಗಳ ಕೆಲಸ, ಕಡಿಮೆ ತರಬೇತಿ ಬೇಕಾಗಬಹುದಾದಂತಹ ಜೋಡಣೆಯ ಕೆಲಸ ಅಥವಾ ಮನೆಯಲ್ಲಿಯೇ ಕುಳಿತು ಬಿಡಿ - ಬಿಡಿ ಭಾಗ ಜೋಡಿಸಿ - ಕಾರ್ಖಾನೆಗೆ ನೀಡುವ ಕೆಲಸ ಇವು ಮಹಿಳಾ ಕಾರ್ಮಿಕರ ಕೆಲಸಗಳ ಮುಖ್ಯ ಗುಣಗಳಾದವು. ಈ ರೀತಿ ಇರುವ ರಫ್ತು ಪ್ರಾಮುಖ್ಯ ಉಳ್ಳ ಉಡುಪು ಕಾರ್ಖಾನೆಗಳು ಪ್ರಪಂಚದಾದ್ಯಂತ ಕಾಣಿಸಿಕೊಳ್ಳುತ್ತಿರುವ ಹೊಸ ಅಂತರ್‌ರಾಷ್ಟ್ರೀಯ ಶ್ರಮ ವಿಭಜನೆಯ ಪ್ರತಿಫಲನವಾಗಿದೆ.

ಎಚ್. ಎಸ್. ಚಂಪಾವತಿ

ಮಲೇಶಿಯ, ಫಿಲಿಫೈನ್ಸ್ ಹಾಗೂ ಹಾಂಕಾಂಗ್ ದೇಶಗಳ ರಫ್ತು ಪ್ರಾಮುಖ್ಯ ಉಡುಪು ಕಾರ್ಖಾನೆಯ ಕೆಲಸಗಾರಿಕೆ-ಒಟ್ಟು ಕಾರ್ಮಿಕರ ಮೇಲೆ, ವಿಶೇಷವಾಗಿ ಯುವ ಮಹಿಳಾ ಕಾರ್ಮಿಕರ ಮೇಲೆ ಹೇಗೆ ಅಪಾಯಕಾರಿ ಪರಿ

ಣಾಮಗಳನ್ನು ಉಂಟು ಮಾಡುತ್ತಿದೆ ಎಂಬುದನ್ನು ತೋರಿಸುತ್ತದೆ. (ರುಕ್ಮಿಣಿರಾವ್, ವಿ, ಸಭಾ ಹುಸೇನ್ 1984; ಡಯಾನಾ ಎಲ್ಸನ್' - 1983)

ಭಾರತದಲ್ಲಿ - ದೆಹಲಿ, ಮದ್ರಾಸ್, ಬಾಂಬೆ ಹಾಗೂ ಕಲಕತ್ತಾ ಈ ಮುಖ್ಯ ಪಟ್ಟಣಗಳಲ್ಲಿ ರಫ್ತು ಪ್ರಮುಖ ನೀತಿಯುಳ್ಳ ಉಡುಪು ಕಾರ್ಖಾನೆಗಳು ಇವೆ. ಇವು ಭಾರತ ಸರ್ಕಾರಕ್ಕೆ ಯುರೋಪಿನ ಜೊತೆ ಇರುವ ರಫ್ತು ಕೋಟಾವನ್ನು ತುಂಬುತ್ತವೆ. ಈ ರಫ್ತು ಪ್ರಾಮುಖ್ಯ ಉಳ್ಳ ಉಡುಪು ಕಾರ್ಖಾನೆಗಳು ಕೋಟಾ ವ್ಯವಸ್ಥೆಯಿಂದ ನಿಯಂತ್ರಿತವಾಗಿವೆ. ಹೀಗಾಗಿ ಇವುಗಳ ಭವಿಷ್ಯ ಅನಿರ್ದಿಷ್ಟ. ಜೊತೆಗೆ ಅಂತರ್‌ರಾಷ್ಟ್ರೀಯಗೊಳ್ಳುತ್ತಿರುವ ಬಂಡವಾಳಕ್ಕೆ-ಅಂದರೆ ಉತ್ಪಾದನೆಯ ಸ್ಥಳಗಳು ಮುಂದುವರಿದ ರಾಷ್ಟ್ರಗಳಿಂದ ಹಿಂದುಳಿದ ರಾಷ್ಟ್ರಗಳಲ್ಲಿ ಪ್ರತ್ಯೇಕ, ಪ್ರತ್ಯೇಕವಾಗಿ ಮರು ರೂಪುಗೊಳ್ಳುತ್ತಿರುವ ಸಂದರ್ಭದಲ್ಲಿ-ಭಾರತ ವಿದೇಶದ ಬಂಡವಾಳಶಾಹಿಗಳಿಗೆ ಅಗ್ಗದ ಸ್ಥಳವಾಗಿ ಮಾರ್ಪಾಡಾಗಬಹುದು. ಇಲ್ಲಿಯವರೆಗೆ ಶ್ರೀಲಂಕಾದ ರೀತಿ 'ಸ್ವತಂತ್ರ ವ್ಯವಹಾರ ಸ್ಥಳ' (free trade zones) ಗಳನ್ನು ಭಾರತ ಬಿಟ್ಟುಕೊಡದಿದ್ದರೂ ಸಹ, ಮುಂಬರುವ ದಿನಗಳಲ್ಲಿ ಸ್ವತಂತ್ರ ಆರ್ಥಿಕ ನೀತಿಗಳು ವಿದೇಶಿಯರ ಬಂಡವಾಳಕ್ಕೆ ಹೆಚ್ಚು ಅನುಕೂಲವಾಗಬಹುದು. ಜೊತೆಗೆ ಕೋಟಾ ಪದ್ಧತಿಯನ್ನು ಅನುಸರಿಸಿಯೇ ಉಡುಪುಗಳ ಕಾರ್ಖಾನೆ ನಡೆಯಬೇಕಾಗಿರುವದರಿಂದ, ಸ್ಥಳೀಯ ಬಂಡವಾಳಶಾಹಿಗಳು ಇಲ್ಲಿ ಬಂಡವಾಳ ಹೂಡಲು ಹಿಂದೆ-ಮುಂದೆ ನೋಡುವ ಸಂದರ್ಭ ಒದಗಬಹುದು. ಏಕೆಂದರೆ ಯಾವಾಗ ಬೇಕೆಂದರೆ ಕುಸಿದು ಬೀಳಬಹುದಾದ ಕಾರ್ಖಾನೆಯ ಮೇಲೆ ಬಂಡವಾಳ ಹೂಡುವುದು ಅವರಿಗೆ ಲಾಭದಾಯಕವಾಗದೇ ಹೋಗಬಹುದು.

ರಾಷ್ಟ್ರೀಯ ಹಾಗೂ ಅಂತರ್‌ರಾಷ್ಟ್ರೀಯ ಹಂತದಲ್ಲಿ ರಫ್ತು ಪ್ರಾಮುಖ್ಯ ನೀತಿಯ ಉಡುಪು ಕಾರ್ಖಾನೆಯ ಸಂದರ್ಭವನ್ನು ನೆನಪಿನಲ್ಲಿಟ್ಟುಕೊಂಡು, ನಾವು ಈ ಕಾರ್ಖಾನೆಯ ಮಹಿಳಾ ಕಾರ್ಮಿಕರ ಸ್ಥಿತಿ-ಗತಿಗಳನ್ನು ಪರಿಗಣಿಸಬೇಕಾಗುತ್ತದೆ. ಹಾಗೂ ಅವರ ಸಮಸ್ಯೆಗಳನ್ನು ಹೋರಾಡುವಲ್ಲಿ ಯೋಜನೆಗಳನ್ನು ರೂಪಿಸಿಕೊಳ್ಳಬೇಕಾಗುತ್ತದೆ.

ಈ ಸಂದರ್ಭದಲ್ಲಿ ನಾನು ರಫ್ತು ಪ್ರಾಮುಖ್ಯ ನೀತಿಯುಳ್ಳ ಉಡುಪು ಕಾರ್ಖಾನೆಯ ಎರಡು ಮುಖ್ಯ ಅಂಶಗಳು ಹಾಗೂ ಅವು ಮಹಿಳಾ ಕಾರ್ಮಿಕರ ಮೇಲೆ ಬೀರುವ ಪ್ರಭಾವಗಳನ್ನು ಗುರುತಿಸುತ್ತೇನೆ.

**ಉತ್ಪಾದನಾ ಹಂತ :**

ಉತ್ಪಾದನೆಯನ್ನು ವಿಘಟಿತಗೊಳಿಸುವುದರಿಂದ ——ಇದು ಮಹಿಳಾ ಕಾರ್ಮಿಕರ ಹಕ್ಕುಗಳನ್ನು ನಾಶಗೊಳಿಸುವುದಲ್ಲದೇ, ಅವರನ್ನು ಅಗ್ಗದ ಬೆಲೆಯ ಶ್ರಮಶಕ್ತಿಯನ್ನಾಗಿಸುತ್ತದೆ. ಹಾಗಾಗಿ ಉಡುಪು ಕಾರ್ಖಾನೆಯ ಉತ್ಪಾದನಾ ಹಂತವನ್ನು ಬಹು ಮುಖ್ಯ ಅಂಶವಾಗಿ ಪರಿಗಣಿಸಬೇಕಾಗುತ್ತದೆ.

---

ಅಂತರರಾಷ್ಟ್ರೀಯಗೊಳ್ಳುತ್ತಿರುವ ಬಂಡವಾಳಕ್ಕೆ ಅಂದರೆ ಉತ್ಪಾದನೆಯ ಸ್ಥಳಗಳು ಮುಂದುವರಿದ ರಾಷ್ಟ್ರಗಳಿಂದ ಹಿಂದುಳಿದ ರಾಷ್ಟ್ರಗಳಲ್ಲಿ ಪ್ರತ್ಯೇಕವಾಗಿ ಮರುರೂಪುಗೊಳ್ಳುತ್ತಿರುವ ಸಂದರ್ಭದಲ್ಲಿ - ಭಾರತ ವಿದೇಶದ ಬಂಡವಾಳಶಾಹಿಗಳಿಗೆ ಅಗ್ಗದ ಸ್ಥಳವಾಗಿ ಮಾರ್ಪಾಡಾಗಬಹುದು.

---

ಉಡುಪು ಕಾರ್ಖಾನೆಯ ಉತ್ಪಾದನಾ ಹಂತ ಎರಡು ಭಾಗಗಳಾಗಿ ವ್ಯವಸ್ಥಿತಗೊಂಡಿದೆ. ಕಾರ್ಖಾನೆ ವಿಭಾಗ ಹಾಗೂ ಕಾರ್ಖಾನೆಯಿರದ ವಿಭಾಗ. ಕಾರ್ಖಾನೆ ವಿಭಾಗದ ಉತ್ಪಾದನೆ ಜೋಡಣೆಗಳ ಮೇಲೆ ರೂಪಿತಗೊಂಡಿದ್ದರೆ, ಕಾರ್ಖಾನೆಯಿರದ ವಿಭಾಗದ, ಉತ್ಪಾದನೆ ದಿನಗೂಲಿಯ ಮೇಲೆ ಹೊರಗಡೆ ಮಾಡಲ್ಪಡುತ್ತದೆ. ಈ ವಿಭಾಗದ ಉತ್ಪಾದನೆಯನ್ನು ಬಹುಮುಖ್ಯವಾಗಿ ಸ್ತ್ರೀಯರು ಮನೆಯಲ್ಲಿಯೇ ಮಾಡುತ್ತಾರೆ. ಕಾರ್ಖಾನೆ ವಿಭಾಗದಲ್ಲಿ-ಕೈಗಾರಿಕೆ ಉಪ-ಒಪ್ಪಂದ ಪದ್ಧತಿ (Industrial sub-conracting) ಹೆಚ್ಚು ಹೆಚ್ಚು ಅಭಿವೃದ್ಧಿಗೊಳ್ಳುತ್ತಿದೆ. ಈ ಪದ್ಧತಿ ಕಾರ್ಮಿಕ ಕಾನೂನುಗಳನ್ನು ಉಲ್ಲಂಘಿಸುವಲ್ಲಿ ಹಾಗೂ ಉತ್ಪಾದನೆಯ ತೆರಿಗೆ ಕಡಿತಗೊಳಿಸುವಲ್ಲಿ ಸಹಾಯವಾಗುತ್ತಿದೆ. ಮನೆಯಲ್ಲಿ ಕೆಲಸ ಮಾಡುವ ಸ್ತ್ರೀ ಕಾರ್ಮಿಕರು - ಯಾವುದೇ ಕಾರ್ಮಿಕ ಕಾನೂನುಗಳ ಕಕ್ಷೆಯ ಒಳಗೆ ಬರುವುದಿಲ್ಲ. ಹಾಗೂ ಕಾರ್ಖಾನೆಯ ಚೌಕಟ್ಟಿನೊಳಗೆ ಇವರು ಬರುವುದಿಲ್ಲವಾದ್ದರಿಂದ-- ಸಂಘಟಿತರಾಗಲು ಯಾವುದೇ ಕಾನೂನುಗಳೂ ಸಹ ಇವರಿಗೆ ಅನ್ವಯಿಸುವುದಿಲ್ಲ. ಕಾರ್ಖಾನೆಯ ವಿಭಾಗದ ಬಹಳಷ್ಟು ಕೆಲಸವನ್ನು - ಒಪ್ಪಂದದ ಮೇರೆಗೆ ಈಗ ಹೆಚ್ಚು - ಹೆಚ್ಚಾಗಿ ಮನೆಯಲ್ಲಿ ಕೆಲಸ ಮಾಡುವ ಮಹಿಳಾ - ಕಾರ್ಮಿಕರಿಗೆ ಕೊಡಲ್ಪಡುತ್ತದೆ.

ಜೊತೆಗೆ ಒಟ್ಟು ಉತ್ಪಾದನಾ ವ್ಯವಸ್ಥೆ ಪ್ರತ್ಯೇಕ ಗೊಂಡಿರುವುದರಿಂದ, ಉತ್ಪಾದನೆ ಶ್ರೇಣೀಕೃತವಾಗಿ ರೂಪುಗೊಂಡಿದೆ. ನಿತ್ಯ ಬದಲಾವಣೆ ಹೊಂದುತ್ತಿರುವ ಉಡುಪಿನ ಮಾದರಿಗಳಲ್ಲಿ ನಷ್ಟವಿಲ್ಲದೇ ಕೆಲಸ ಮಾಡ ಮಾಡಬೇಕಾಗಿರುವುದರಿಂದ ಕಾರ್ಖಾನೆಯ ಒಳಗೆ ಹಾಗೂಮನೆಯ ಒಳಗೆ ದುಡಿಯುವ ಮಹಿಳಾ ಕಾರ್ಮಿಕರು ಯಾವಾಗಲೂ ಹೆಚ್ಚು ಕೆಲಸ ಮಾಡ ಬೇಕಾಗುತ್ತದೆ.

'ಉತ್ಪಾದನಾ ವ್ಯವಸ್ಥೆಯ ಪ್ರತ್ಯೇಕತೆಗಳು (Structural differenciation of production) ವಿಘಟಿತಗೊಂಡಿರುವ ಉತ್ಪಾದನಾ ಹಂತದೊಂದಿಗೆ, ರಫ್ತು ಪ್ರಾಮುಖ್ಯ ಉಳ್ಳ ಉಡುಪು ಕಾರ್ಖಾನೆ ವ್ಯವಸ್ಥೆಯ ಪ್ರತ್ಯೇಕತೆಯನ್ನು ಒಳಗೊಂಡಿದೆ. ಇದು ಉತ್ಪಾದನೆ ಹಂತವನ್ನು ಕಣ್ಣಿಗೆ ಕಾಣಿಸದ ರೀತಿ ಮಾಡುವಲ್ಲಿ ಹಾಗೂ ಲಾಭ ಗಳಿಸುವಲ್ಲಿ ಅಧಿಕಾರಿವರ್ಗ ದವರಿಗೆ ಹೆಚ್ಚು ಸಹಾಯ ಮಾಡುತ್ತದೆ. ಕಾರ್ಮಿಕ ಕಾನೂನು ಹಾಗೂ ತೆರಿಗೆ ನಿಬಂಧನೆ ತಪ್ಪಿಸುವುದರ ಮೂಲಕ, ಅಧಿಕಾರಿ ವರ್ಗ ಮಹಿಳಾ ಕಾರ್ಮಿಕರನ್ನು ಅಗ್ಗದ ಬೆಲೆಗೆ-ಬೇಕಾದಾಗ ಉಪಯೋಗಿಸಿ, ಬೇಡ ವಾದಾಗ ತೆಗೆದು ಹಾಕುತ್ತಾ ಲಾಭಗಳಿಕೆ ಮಾಡುತ್ತಾರೆ. ಕಾರ್ಖಾನೆಯ ಒಳಗೆ ಕೆಲಸ ಮಾಡುವ ಮಹಿಳಾ ಕಾರ್ಮಿಕರೂ ಸಹ ಅವಶ್ಯವಾದಾಗ ಖಾಲಿ ಸ್ಥಳ ತುಂಬುವ ತಾತ್ಕಾಲಿಕ ಶ್ರಮಶಕ್ತಿಯಾಗಿ ಬಿಡುತ್ತಾರೆ. ಮನೆಯಲ್ಲಿ ಕೆಲಸಮಾಡುವ ಮಹಿಳಾ ಕಾರ್ಮಿಕರಿಗೂ, ಹಾಗೂ ಜೋಡಣೆ ಕೆಲಸ ಮಾಡುವ ಕಾರ್ಖಾನೆಯ ಮಹಿಳಾ ಕಾರ್ಮಿಕರಿಗೂ-ಉತ್ಪಾದನೆಯಲ್ಲಿ ತಮ್ಮೀರ್ವರ

---

ಬಂಡವಾಳ ಅಗ್ಗದ ಶ್ರಮವನ್ನು 'ಕೋಮಲ ಬೆರಳುಗಳಲ್ಲಿ' ಹಾಗೂ 'ಸಹನಾ ಮೂರ್ತಿ'ಗಳಾದ ಯುವ ಮಹಿಳಾ ಕಾರ್ಮಿಕ ರಲ್ಲಿ ಅರಸುತ್ತದೆ.

---

ಕಾರ್ಮಿಕರು ತಾವು ತಯಾರಿಸಿದ ವಸ್ತುಗಳ ಮೇಲೆ ಹಿಡಿತ ಹೊಂದುವುದನ್ನು ಅಕ್ಷರಶಃ ನಿರಾಕರಿಸುತ್ತದೆ. ಉತ್ಪಾ ದನಾ ವ್ಯವಸ್ಥೆ ಎರಡು ವಿಭಾಗಗಳಲ್ಲಿ ಇರುವ ರೀತಿ- ಎರಡು ಬಗೆಯ ರಫ್ತುಗಾರರು ಇದ್ದಾರೆ.

ಅಂಗಡಿ ರಫ್ತುಗಾರ ಹಾಗೂ ಉತ್ಪಾದನೆ ರಫ್ತು ಗಾರ. ನಾನು ಮೊದಲೇ ತಿಳಿಸಿದಂತೆ ಉತ್ಪಾದನೆ ಶ್ರೇಣೀ ಕೃತ ವ್ಯವಸ್ಥೆಯಲ್ಲಿ ರೂಪುಗೊಂಡಿದೆ. ರಫ್ತುಗಾರರು– ಉಪಕಾಂಟ್ರ್ಯಾಕ್ಟರ್ ; ಫ್ಯಾಬ್ರಿಕೇಟರ್ ಮತ್ತು ಕಸೂತಿ ಗಾರರಿಗೆ ಡೈಯಿಂಗ್ ಹಾಗೂ ಉಡುಪು ಕೊನೆಗೊಳಿಸುವ ಕೆಲಸಗಳನ್ನು ಹಂಚಿರುತ್ತಾರೆ. ರಫ್ತುಗಾರರು ಮುಖ್ಯ ವಾಗಿ ಮಾದರಿ ಉಡುಪಿನ ಕತ್ತರಿಸುವಿಕೆ ಹಾಗೂ ರಫ್ತು ಖಾತೆಯನ್ನು ತಮ್ಮ ಕೈಯಲ್ಲಿ ಇಟ್ಟುಕೊಂಡಿರುತ್ತಾರೆ. (ಗುಣ ನಿಯಂತ್ರಣ ಹಾಗೂ ಪ್ಯಾಕಿಂಗ್) ಉಳಿದ ಎಲ್ಲಾ ಕೆಲಸಗಳ ಜವಾಬ್ದಾರಿ ಉಪ-ಕಂಟ್ರ್ಯಾಕ್ಟ್‌ದಾರನದಾಗಿ ರುತ್ತದೆ. ಇಲ್ಲಿಯ ಉತ್ಪಾದನಾ ವ್ಯವಸ್ಥೆಯಲ್ಲಿ ಎದ್ದು ಕಾಣಿಸುವ ಗುಣವೆಂದರೆ ಹೆಣಿಕೆಗಾರ-ರಫ್ತುಗಾರ-ಕಸೂತಿ ನಿಯಂತ್ರಿಕ ಹಾಗೂ ಮನೆಯ ಮಹಿಳಾ ಕಾರ್ಮಿಕರ ಸಂಬಂಧ. ಈ ರೀತಿಯ ಉತ್ಪಾದನೆಯ ಪ್ರತ್ಯೇಕತೆಗಳು ಒಟ್ಟು ಸಂಬಂಧದ ಆಳಗಳು ತಿಳಿದಿರುವುದಿಲ್ಲ. ಹೀಗೆ ವಿಘಟಿತ ಉತ್ಪಾದನಾ ಹಂತ ಹಾಗೂ ವ್ಯವಸ್ಥಿತ ವಿಭಜನೆಯ - ಅಗ್ಗದ ಶ್ರಮಶಕ್ತಿ ಬಳಸಿಕೊಳ್ಳಲು ಹಾಗೂ ಉತ್ಪಾದನೆ ಸ್ಥಳವನ್ನು ಅಗ್ಗದ ದರದಲ್ಲಿ ಬಳಸಿ ಕೊಳ್ಳಲು ಬಂಡವಾಳಕ್ಕೆ ಸಹಕಾರಿಯಾಗಿ ಕೆಲಸ ಮಾಡುತ್ತಿದೆ.

'ಮಹಿಳಾ ಕಾರ್ಮಿಕರ ಮೇಲಿನ ಪರಿಣಾಮಗಳು:

ಮೇಲ್ಕಂಡ ರಫ್ತು ಪ್ರಾಮುಖ್ಯ ಉಡುಪು ಕಾರ್ಖಾನೆಯ ಉತ್ಪಾದನೆಯ ಹಂತದ ರಾಜಕೀಯ ಪರಿಣಾಮಗಳು ಸಾಮಾನ್ಯವಾಗಿ ಕಾರ್ಮಿಕರ ಮೇಲೆ ವಿಶೇಷವಾಗಿ ಮಹಿಳಾ ಕಾರ್ಮಿಕರ ಮೇಲೆ ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತವೆ. ಉತ್ಪಾದನೆಯ ಹಂತದಲ್ಲಿ ನಾವು ನೋಡಿದ ಹಾಗೆ, ಬಂಡವಾಳ ಅಗ್ಗದ ಶ್ರಮವನ್ನು 'ಕೋಮಲ ಬೆರಳುಗಳಲ್ಲಿ' ಹಾಗೂ "ಸಹನಾ ಮೂರ್ತಿ"ಗಳಾದ ಯುವ ಮಹಿಳಾ ಕಾರ್ಮಿಕರಲ್ಲಿ ಅರ ಸುತ್ತಾದೆ. ಇದು ಮನೆಯ ಹಾಗೂ ಜೋಡಣೆಯ ಕೆಲಸದಲ್ಲಿ ತೊಡಗಿರುವ ಮಹಿಳಾ ಕಾರ್ಮಿಕರ ಹಕ್ಕು ಗಳನ್ನು ಅಧಿಕಾರಿವರ್ಗ ನಿರಾಕರಿಸುವ ರೀತಿಯಲ್ಲಿ ಪ್ರತಿ

ಫಲಿತವಾಗಿದೆ. ಕಾರ್ಖಾನೆಯ ವಿಭಾಗದ ಮಹಿಳಾ ಕಾರ್ಮಿಕರು ಹೆಚ್ಚಾಗಿ ಒಪ್ಪಂದದ ಮೇಲೆ ಕಾರ್ಮಿಕರಾಗಿರುತ್ತಾರೆ. ಅವರ ಕೆಲಸದ ನೇಮಕಾತಿ–ಬಾಯಿ ಮಾತುಗಳಿಂದ ಮಾಡಲ್ಪಟ್ಟಿರುತ್ತದೆಯೇ ಹೊರತು, ಕಾನೂನನ್ವಯ ನೇಮಕಾತಿಗಳಾಗಿರುವುದಿಲ್ಲ. ಈ ರೀತಿಯ ವ್ಯವಸ್ಥೆಯಿಂದಾಗಿ ಕಾರ್ಮಿಕರಲ್ಲಿ ಅಸ್ಥಿರತೆ ಹುಟ್ಟುವುದಲ್ಲದೇ, ಆಡಳಿತ ಹಾಗೂ ಮೇಲ್ವಿಚಾರಕ ವರ್ಗದವರಿಗೆ ವಿಧೇಯರಾಗುವ ಪರಿಸ್ಥಿತಿಯನ್ನು ಮಹಿಳಾ ಕಾರ್ಮಿಕರಲ್ಲಿ ಹುಟ್ಟು ಹಾಕುತ್ತದೆ. ಜೊತೆಗೆ ಮಹಿಳಾ ಕಾರ್ಮಿಕರು ಲೈಂಗಿಕ ಶೋಷಣೆಗೆ ವಿಧೇಯರಾಗುವಂತೆ ಹಾಗೂ ಆಡಳಿತ ಮತ್ತು ಮೇಲ್ವಿಚಾರಕ ವರ್ಗದವರ ಇಷ್ಟ-ಅನಿಷ್ಟಗಳಿಗೆ ತಕ್ಕಂತೆ ವರ್ತಿಸುವುದನ್ನು ಹುಟ್ಟು ಹಾಕುತ್ತದೆ.

ಎಲ್ಲಿ ಜೋಡಣೆಯ ಹಂತದಲ್ಲಿ ಉತ್ಪಾದನೆ ವ್ಯವಸ್ಥಿತಗೊಂಡಿದೆಯೋ, ಅಲ್ಲಿ ಮಹಿಳಾ ಕಾರ್ಮಿಕರು ಜೋಡಣೆಯ ಕೆಲಸಗಳಲ್ಲಿ ತೊಡಗಿಸಲ್ಪಟ್ಟಿದ್ದರೆ, ಪುರುಷ ಕಾರ್ಮಿಕರು ಉಡುಪು ಕತ್ತರಿಸುವ ತರಬೇತುದಾರರಾಗಿ, ಮಾದರಿ ಡಿಸೈನ್ ತರಪೇತು ಪಡೆದವರಾಗಿರುತ್ತಾರೆ. ಮಹಿಳಾ ಕಾರ್ಮಿಕರು ಮುಖ್ಯವಾಗಿ ಕೈಕಸೂತಿಗಾರರಾಗಿ, ದಾರ ಕತ್ತರಿಸುವವರಾಗಿ ಅಥವಾ ಗುಂಡಿ ಹಚ್ಚುವವರಾಗಿ ಕೆಲಸ ಮಾಡುತ್ತಾರೆ. ಮಹಿಳಾ ಕಾರ್ಮಿಕರ ಕಡಿಮೆ ವೇತನವನ್ನು ಅವರ 'ಪರಿಣತಿಯಿಲ್ಲದ ಕೆಲಸ' ಹಾಗೂ 'ಯಂತ್ರ ನಡೆಸುವ ಅಸಾಮರ್ಥ್ಯತೆ' ಎಂಬ ವಾದಗಳಿಂದ ಸಮರ್ಥಿಸಲ್ಪಟ್ಟಿದೆ.

ಕಾರ್ಖಾನೆಯ ಜೋಡಣೆ ಕೆಲಸದ ಮಹಿಳಾ ಕಾರ್ಮಿಕರು ಮನೆಕೆಲಸ ಹಾಗೂ ಕಾರ್ಖಾನೆಯ ಕೆಲಸ ಎಂದು ಎರಡು ಬಗೆಯ ಕೆಲಸದ ಹೊರೆಯನ್ನು ಸಾಮಾನ್ಯವಾಗಿ ಹೊರುತ್ತಾರೆ. ಅವರು ಒಪ್ಪಂದದ ಮೇಲೆ ಕೆಲಸ ಮಾಡುವುದರಿಂದ ಹೆರಿಗೆ ಹಾಗೂ ಇತರ ಸೌಲಭ್ಯಗಳಿಗೆ ಅರ್ಹರಾಗಿರುವುದಿಲ್ಲ. ಉಪ-ಕಾಂಟ್ರ್ಯಾಕ್ಟ್ ಪದ್ಧತಿ-ಸಾವಿರಾರು ಮನೆಯ ಮಹಿಳಾ ಕಾರ್ಮಿಕರ ಕಾಣದ ಕೈಗಳನ್ನು-ಉತ್ಪಾದನೆ ಮುಂದುವರಿಸಲು ಎಳೆದುಕೊಳ್ಳುವತನಕ, ಅಧಿಕಾರ ವರ್ಗದವರು ಕಾರ್ಖಾನೆಯ ಜೋಡಣೆಯ ವಿಭಾಗದ ಕಾರ್ಮಿಕರನ್ನು ತಾತ್ಕಾಲಿಕವಾಗಿ ನೇಮಕ ಮಾಡಿಕೊಂಡಿರುತ್ತಾರೆ.

ಮನೆಯಲ್ಲಿ ಕೆಲಸ ಮಾಡುವ ಮಹಿಳಾ ಕಾರ್ಮಿಕರು–ಕಾರ್ಖಾನೆಯ ಕಾರ್ಮಿಕ ಕಾನೂನುಗಳಡಿ ಬರದೇ ಇರುವುದರಿಂದ, ಅವರು ದಿನಗೂಲಿಯ ಮೇಲೆ ಕೆಲಸ ಮಾಡುತ್ತಾರೆ. ಅವರ ಕೆಲಸ-ಮನೆಗೆಲಸದೊಟ್ಟಿಗೆ ಸೇರಿಸಿ ಆರಾಮ ವೇಳೆಯಲ್ಲಿ ಮಾಡಬಹುದಾದ ಕೆಲಸ ಎಂದು ಪರಿಗಣಿತವಾಗಿದೆ. ಆದ್ದರಿಂದ ಅವರು ತಮ್ಮ ಬಿಡುವಿನ ವೇಳೆಯ ಪೂರಕ ಹಣ ಗಳಿಕೆದಾರರು ಎಂದು ಪರಿಗಣಿಸಲ್ಪಟ್ಟಿದ್ದಾರೆ. ಇವರ ಉತ್ಪಾದನೆ ನೇರವಾಗಿ ರಫ್ತುಗಾರರಿಂದ ನಿಯಂತ್ರಿಸಲ್ಪಟ್ಟಿಲ್ಲ. ಇದು ನೇರವಾಗಿ ಉಪ-ಕಾಂಟ್ರ್ಯಾಕ್ಟ್‌ದಾರರಿಂದ ನಿಯಂತ್ರಿಸಲ್ಪಟ್ಟಿದೆ. ಮನೆಯ ಮಹಿಳಾ ಕಾರ್ಮಿಕರು ಯಾವಾಗಲೂ ಕೆಲಸದ ಅಸ್ಥಿರತೆಯನ್ನು ಹೊಂದಿರುತ್ತಾರೆ. ಯಾಕೆಂದರೆ ಯಾವುದೇ ಹೊಸ ಮಾದರಿ ಡಿಸೈನ್‌ನಲ್ಲಿ ಕಾಣಿಸಿಕೊಂಡಾಗ ಬೇಡಿಕೆಗಳಲ್ಲಿ ಏರು-ಪೇರು ಉಂಟಾಗುತ್ತದೆ. ಈ ಮನೆಯ ಮಹಿಳಾ ಕಾರ್ಮಿಕರಿಗೆ ತಾವು ಕೆಲಸ ಮಾಡುವ ಉಪ-ಕಾಂಟ್ರ್ಯಾಕ್ಟ್‌ದಾರರ 'ಒಳ್ಳೆಯತನ' ದ ಮೇಲೆ ಅವರ ಕೆಲಸದ ಸ್ಥಿರತೆ ಅವಲಂಬಿತವಾಗಿರುತ್ತದೆ. ಯಾವುದೇ ಕಾರ್ಮಿಕ ಕಾನೂನುಗಳ ಕಕ್ಷೆಯೊಳಗೆ ಇವರು ಬರುವುದಿಲ್ಲವಾದರಿಂದ, ಒಟ್ಟಾಗಿ ಹೋರಾಡುವುದು ಇವರಿಗೆ ಕಷ್ಟವಾಗುತ್ತದೆ.

ರಫ್ತು ಪ್ರಾಮುಖ್ಯವಾಗಿರುವ ಉಡುಪು ಕಾರ್ಖಾನೆಯ ಮಹಿಳಾ ಕಾರ್ಮಿಕರ ಸ್ಥಿತಿಗಳನ್ನು ಒಟ್ಟಾಗಿ ಹೀಗೆ ಹೇಳಬಹುದು.

1. ಮಹಿಳಾ ಕಾರ್ಮಿಕರು ಒಂದು ಪಂಗಡವಾಗಿ ಕಡಿಮೆ ವೇತನ ಪಡೆಯುತ್ತಾರೆ-

2. ಅವರಿಗೆ ಅವರು ಉತ್ಪಾದಿಸಿದ ವಸ್ತುಗಳ ಮೇಲೆ ನಿಯಂತ್ರಣವಿರುವುದಿಲ್ಲ.

3. ಅವರು ಲಿಂಗ ಭಿನ್ನವಾಗಿರುವ ಕಡಿಮೆ ವೇತನದ ಕೆಲಸಗಳಲ್ಲಿ ನಿರತರಾಗಿರುತ್ತಾರೆ.

4. ಅವರು 'ಪರಿಣತಿಯಿಲ್ಲದ' ಕೆಲಸಗಾರರು.

5. ಹೆರಿಗೆ ಸೌಲಭ್ಯ, ಮಕ್ಕಳ ಪಾಲನೆಯಂತಹ ರಕ್ಷಣಾ ಕಾನೂನುಗಳು ಪ್ರಭಾವಿತವಾಗಿಲ್ಲ.

6. ಮನೆ ಮಹಿಳಾ ಕಾರ್ಮಿಕರು ಯಾವುದೇ ಕಾರ್ಮಿಕ ಕಾಯಿದೆಯೊಳಗೆ ಬರುವುದಿಲ್ಲ.

7. ಕಾರ್ಖಾನೆಯ ಒಳಗಡೆ ಮಹಿಳಾ ಕಾರ್ಮಿಕರು ಲೈಂಗಿಕ ಶೋಷಣೆಗೆ ಒಳಗಾಗುತ್ತಾರೆ. ಕಾರ್ಮಿಕರ

ಸಂಘಟನೆಗಳು ಸಂಪ್ರದಾಯಬದ್ಧ ಹೋರಾಟದ ಯೋಜನೆಗಳನ್ನು ಹೊಂದಿರುವುದರಿಂದ, ಮಹಿಳಾ ಕಾರ್ಮಿಕರ ವಿಶಿಷ್ಟ ಸಮಸ್ಯೆಗಳನ್ನು ಪರಿಗಣಿಸುವಲ್ಲಿ ಅವು ಸೋಲುತ್ತವೆ.

ಗ್ರಂಥ ಋಣ


1. ಡಯನಾ ಎಲ್ಸನ್ 1983
"ನಿಂಬಲ್ ಫಿಂಗರ್ಸ್ ಎಂಡ್ ಅದರ್ ಪೇಬಲ್ಸ್" -ವೆಂಡಿ ಚಾಪ್‌ಕಿನ್ಸ್ ಎಂಡಿ ಸಿಂಥಿಯಾ ಎಲಗೋ ಸಂಪಾದಕೀಯದ ಆಫ್ ಕಾಮನ್ ಕ್ಲಾತ್ ನಿಂದ ಆಯ್ದ ಲೇಖನ. ಟಿ. ಎನ್. ಎ. ಆ್ಯಮ್ಸ್ಟರ್‌ಡಮ್.

2. ಕಲ್ಪಗಂ, ಯು 1981
"ಲೇಬರ್ ಇನ್ ಸ್ಮಾಲ್ ಇಂಡಸ್ಟ್ರೀ: ಕೇಸ್ ಆಫ್ ಎಕ್ಸ್‌ಪೋರ್ಟ್ ಗಾರ್ಮೆಂಟ್‌ಇಂಡಸ್ಟ್ರೀ ಇನ್", ಮದ್ರಾಸ್, ಎಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ, ಸಂಚಿಕೆ 16, ನಂ 48

3. ಕಲ್ಪಗಂ, ಯು 1985
"ವುಮೆನ್ ಆ್ಯಂಡ್ ದ ಇಂಡಸ್ಟ್ರಿಯಲ್ ರಿಸರ್ವ್ ಆರ್ಮಿ, ಎರಿಅಪ್ರೈಸಲ್", -ಎಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ. ಸಂಚಿಕೆ 13, ನಂ. 101-11

4. ನಿರ್ಮಲ, ಬ್ಯಾನರ್ಜಿ 1977
"ಎಕ್ಸ್‌ಪೋರ್ಟ್ ಆ್ಯಂಡ್ ದ ಇಂಡಿಯನ್ ಎಕಾನಮಿ", ಎಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ, ಸಂಚಿಕೆ 12, ನಂ. 11.

5. ರುಕ್ಮಿಣಿ ರಾವ್, ಸಭಾ ಹುಸೇನ, 1984
ಇನ್‌ವಿಸಿಬಿಲ್ ಹ್ಯಾಂಡ್ಸ್: ವಿಮೆನ್ ವರ್ಕರ್ಸ್ ಇನ್ ದಿ ಗಾರ್ಮೆಂಟ್ ಎಕ್ಸ್‌ಪೋರ್ಟ್‌ರೆ ಓರಿಯೆಂಟೆಡ್ ಇಂಡಸ್ಟ್ರಿ, ನ್ಯೂ ದೆಹಲಿ.

6. ಸುಮಿತ್ರಾ. ಬಿಸ್ಥ : 1981
"ಎಕ್ಸ್‌ಪೋರ್ಟ್ ಆ್ಯಂಡ್ ಎಂಪ್ಲಾಯರ್‌ಮೆಂಟ್ ಇನ್ ಇಂಡಿಯಾ", ಎಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ, ಸಂಚಿಕೆ 42, 43 ರ ಅಕ್ಟೋಬರ್ 17-24.


---

## ಜರ್ಮನಿಯ ಕಾರ್ಮಿಕ ಮಹಿಳಾಚ ಳಿವಳಿ (1860-1919)

19ನೇ ಶತಮಾನದಲ್ಲಿ ಕಾರ್ಮಿಕ ಚಳವಳಿ ಹಾಗೂ ಮಹಿಳಾ ಚಳವಳಿಗಳ ಮಧ್ಯ ಅಸ್ತಿತ್ವದಲ್ಲಿದ್ದ ಘರ್ಷಣೆ, ದ್ವಂದ್ವ, ಸಂಘರ್ಷಗಳನ್ನು ಜರ್ಮನಿಯ ಕಾರ್ಮಿಕ ಮಹಿಳೆಯರ ಐತಿಹಾಸಿಕ ಹೋರಾಟದಲ್ಲಿ ಕಾಣಬಹುದು. ಆಟ್ಟೋ ಪೀಟರ್ಸ್ ಎಂಬ ಮಹಿಳೆ ನಾಯಕತ್ವ ವಹಿಸಿದ ಜರ್ಮನಿಯ ಮಹಿಳಾ ಚಳವಳಿಯನ್ನು 'ಬೂರ್ಜ್ವಾ' ಮಹಿಳಾ ಚಳವಳಿ ಎಂದು ಕರೆದ ಕ್ಲಾರಾ ಜಟ್‌ಕಿನ ಜರ್ಮನಿಯ ಸೋಷಲಿಸ್ಟ್ ಪಂಗಡದಲ್ಲಿ ಕಾರ್ಮಿಕ ಮಹಿಳೆಯರನ್ನು ಸಂಘಟಿಸಿದ ಪ್ರಥಮ ಮಹಿಳೆ. ಕಾರ್ಮಿಕ ಮಹಿಳೆಯರನ್ನು ಸಂಘಟಿಸುತ್ತಾ ಮಹಿಳೆಯರ ಹಕ್ಕುಗಳಿಗಾಗಿ ಜಾಗತಿಕ ಕಾರ್ಮಿಕ ದೃಷ್ಟಿಕೋನದಿಂದ ಹೋರಾಡುವ ಅಗತ್ಯವನ್ನು ಈಕೆ ಧ್ವನಿಸಿದಳು. ಸೋಷಲಿಸ್ಟ್ ಡೆಮಾಕ್ರಟಿಕ್ ಪಕ್ಷದ ಒಳಗೇ ಮಹಿಳಾ ಚಳವಳಿಯ ಅಗತ್ಯವನ್ನು ಕುರಿತು ವಾದಿಸಿದ ಕ್ಲಾರಾ, ಮಹಿಳೆ ಸ್ವತಂತ್ರ್ಯಳಾಗಲು ಮನೆಯ ಹೊರಗಡೆ ದುಡಿಯುವಂತಹ ಮುಖ್ಯ ಪ್ರಶ್ನೆಗಳನ್ನು ಎತ್ತಿದಳು. ಹೆಂಗಸು ಹೊರಗಡೆ ದುಡಿಯುವುದು ಪುರುಷರ ಕೆಲಸದ ಸಾಧ್ಯತೆಗಳಿಗೆ ಆತಂಕ ಉಂಟುಮಾಡುತ್ತದೆ ಎಂಬ ಭೀತಿ ಮಹಿಳೆಯರು ಹೊರಗೆ ದುಡಿಯುವುದನ್ನು ಪುರುಷ ಕಾರ್ಮಿಕರು ವಿರೋಧಿಸುವಂತಹ ಸ್ಥಿತಿ ಅದಾಗಿತ್ತು. ಸೋಷಲಿಸ್ಟ್ ಡೆಮಾಕ್ರಟಿಕ್ ಪಾರ್ಟಿಯಲ್ಲಿ ಹಾಗೂ ಇತರ ಕಾರ್ಮಿಕ ಸಂಘಗಳಲ್ಲಿ ಕ್ಲಾರಾ ಹಾಗೂ ಇತರ ಜರ್ಮನಿಯ ಪ್ರಮುಖ ಮಹಿಳಾ ಹಕ್ಕುಗಳಿಗಾಗಿ ಹೋರಾಡಿದ ಫಲವಾಗಿ ಮಹಿಳೆಯರ ದುಡಿಯುವ ಹಕ್ಕಿನ ವಿರುದ್ಧವಿದ್ದ ಅನೇಕ ರಾಷ್ಟ್ರದ ಕಾನೂನುಗಳು ರದ್ದಾದವು.

# ಮದ್ರಾಸಿನ ದುಡಿಯುವ ಮಹಿಳೆಯರ ಒಕ್ಕೂಟ

ಸಾವಿತ್ರಿ ಜಿ. ಕೆ.

ತಮಿಳುನಾಡು ಮಹಿಳೆಯರಿಂದ, 'ದುಡಿಯುವ ಮಹಿಳೆಯರ ವೇದಿಕೆ' ಸ್ಥಾಪಿಸಲ್ಪಟ್ಟಿತು.

ಈ ವೇದಿಕೆ ಹಮ್ಮಿಕೊಂಡ ಹಲವಾರು ಕಾರ್ಯಕ್ರಮಗಳ ಬಗ್ಗೆ ಆ ಕಾರ್ಯಕ್ರಮಗಳಿಗೆ, ವೇದಿಕೆಗೆ ಹಣ ಒದಗಿಸಿದ ಮಾಧ್ಯಮಗಳಿಗೆ ತಿಳಿಯಪಡಿಸುವುದಕ್ಕಾಗಿ, ಒಂದು ಸುದೀರ್ಘ ವರದಿಯನ್ನು ವೇದಿಕೆ ತಯಾರಿಸಿತು. ಆ ವರದಿಯ ಸ್ಥೂಲ ಪರಿಚಯವೇ ಈ ಲೇಖನವಾಗಿದೆ.

ವೇದಿಕೆ ಹುಟ್ಟಿ ಬೆಳೆದು ಬೇರೂರಿದ ಸ್ಥಳಗಳೆಂದರೆ-1) ತಮಿಳುನಾಡಿನ ಮದರಾಸು 2) ಮಧುರೆ ಪ್ರಾಂತದ ದಿಂಡಿಗಲ್ 3) ತಂಜಾವೂರು ಪ್ರಾಂತದ ಆದಿರಾಂ ಪಟ್ಟಣಂ 4) ಪೂರ್ವ ಆರ್ಕಾಟ್‌ನ ವೆಲ್ಲೂರು 5) ಕರ್ನಾಟಕದ ಬೆಂಗಳೂರು ಮತ್ತು 6) ಆಂಧ್ರದ ನರ್ಸಾಪುರ.

ಜಯ ಅರುಣಾಚಲಂ ಎಂಬ ಮಹಿಳೆ ವೇದಿಕೆಯ ಮಾರ್ಗದರ್ಶಿಯಾಗಿ ಅಧ್ಯಕ್ಷಿಣಿಯಾಗಿ,ಶ್ರಮವಹಿಸಿದರು.

ವಿವಿಧ ಸಣ್ಣ ಕೈಗಾರಿಕೆಗಳಲ್ಲಿ ತೊಡಗಿರುವ ಅಸಂಖ್ಯಾತ ದುಡಿಯುವ ಮಹಿಳೆಯರನ್ನೊಳಗೊಂಡ ಮದ್ರಾಸು ಪ್ರಾಂತವನ್ನು ವೇದಿಕೆ ತನ್ನ ಕಾರ್ಯಕ್ಷೇತ್ರವನ್ನಾಗಿ ಆಯ್ದುಕೊಂಡಿತು; ಉತ್ಪಾದನೆ ಮತ್ತು ಪುನರುತ್ಪಾದನೆ– ಎರಡೂ ಕೆಲಸಗಳಲ್ಲಿ ಮಹಿಳೆಯರನ್ನು ಬಲಗೊಳಿಸುವುದೇ ಧ್ಯೇಯವನ್ನಾಗಿಟ್ಟುಕೊಂಡ ವೇದಿಕೆ, ದಿನನಿತ್ಯದ ಗಳಿಕೆ ಕನಿಷ್ಠ ವೆಚ್ಚಕ್ಕೂ ಸಾಕಾಗದಂತಹ ಬಡಮಹಿಳೆಯರಿಗೆ 'ಡಿ.ಐ.ಆರ್. ಸ್ಕೀಮ್' ಸೌಲಭ್ಯದಡಿಯಲ್ಲಿ ಕಡಿಮೆ ಬಡ್ಡಿದರಕ್ಕೆ ಸಾಲ ಒದಗಿಸಿಕೊಟ್ಟಿತು. ಆದರೆ ಇಲ್ಲೂ ಹೆಚ್ಚಿನ ಮೊತ್ತದ ಸಾಲ ಸಿಗುತ್ತಿರಲಿಲ್ಲವಾದ್ದರಿಂದ, ಮಹಿಳೆಯರು ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಸಾಲ ಪಡೆಯುವಂತೆ ಆಯಿತು. ವೈಯಕ್ತಿಕವಾಗಿ ಮಹಿಳೆಯರಿಗೆ ದೊಡ್ಡ ಮೊತ್ತದ ಸಾಲ ಸಿಗಲಿಲ್ಲವಾದ್ದರಿಂದ ವೇದಿಕೆ, ಸಾಲವನ್ನು ಇಚ್ಛಿಸುವ ಮಹಿಳೆಯರನ್ನು ವೇದಿಕೆಗೆ ಸದಸ್ಯೆಯರನ್ನಾಗಿ ಮಾಡಿಕೊಂಡು, ಪ್ರತಿ ಹತ್ತು ಮಹಿಳೆಯರಿಗೂ ಒಂದೊಂದು ತಂಡ ನಿರ್ಮಿಸಿತು. ಈ ತಂಡದವರಿಂದ, ಮಹಿಳೆಯರು ಬ್ಯಾಂಕ್ ಸಾಲ ಪಡೆಯುವ ಅವಕಾಶ ಸಿಕ್ಕಿತು. ಈ ತಂಡಗಳಲ್ಲಿ ಪ್ರತಿ ತಂಡಕ್ಕೆ, ತಂಡದ ಹತ್ತು ಸದಸ್ಯರಲ್ಲೇ ಒಬ್ಬ ಮಹಿಳೆ ನಾಯಕಿಯಾಗಿ ಜವಾಬ್ದಾರಿ ಹೊತ್ತು ಪ್ರತಿ ಮಹಿಳೆಯೂ ಪಡೆದ ಸಾಲಕ್ಕೆ ಪೂರ್ಣ ಜವಾಬ್ದಾರಳಾಗಿರುತ್ತಿದ್ದಳು.

> ವಿವಿಧ ಸಣ್ಣ ಕೈಗಾರಿಕೆಗಳಲ್ಲಿ ತೊಡಗಿರುವ ಅಸಂಖ್ಯಾತ ದುಡಿಯುವ ಮಹಿಳೆಯರನ್ನೊಳಗೊಂಡ ಮದ್ರಾಸು ಪ್ರಾಂತವನ್ನು ವೇದಿಕೆ ತನ್ನ ಕಾರ್ಯಕ್ಷೇತ್ರವನ್ನಾಗಿ ಆಯ್ದುಕೊಂಡಿತು.

ಮಹಿಳೆಯರು ಹೀಗೆ ಬ್ಯಾಂಕ್ ಸಾಲ ಪಡೆವ ಹಂತದಲ್ಲಿ ವೇದಿಕೆ ಹಲವಾರು ಧ್ಯೇಯಗಳನ್ನು ಹಾಕಿಕೊಂಡಿತು: ಮಹಿಳೆಯರು ಪರಸ್ಪರ ಹೊಂದಾಣಿಕೆಯಿಂದ ದುಡಿದು, ಕ್ರಿಯಾತ್ಮಕ-ರಚನಾತ್ಮಕ ಕೆಲಸಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ತೊಡಗಲು ಸಮಯ ಉಳಿಸಿಕೊಳ್ಳುವುದು, ಸಣ್ಣ ಕೈಗಾರಿಕೆಯಲ್ಲಿರುವ ಸಾಧ್ಯವಾದಷ್ಟು ಮಹಿಳೆಯರಿಗೆ ಬ್ಯಾಂಕ್ ಸಾಲ ಸಿಗುವಂತೆ ಮಾಡುವುದು, ದುಡಿಯುವ ಬಡಮಹಿಳೆಯರಿಗೆ ಶಿಶುವಿಹಾರಗಳನ್ನೂ "ಡೇಕೇರ್ ಸೆಂಟರ್"ಗಳನ್ನೂ ನಿರ್ಮಿಸುವುದು, ಸಂಘದ ಎಲ್ಲಾ ಮಹಿಳೆಯರಲ್ಲೂ, 'ಹಕ್ಕಿಗಾಗಿ ಹೋರಾಟ'ದ ಕಿಚ್ಚು ತುಂಬುವುದು...... ಮುಂತಾದವು.

ಟ್ರೇಡ್ ಯೂನಿಯನ್ ಕಾಯಿದೆಯಡಿಯಲ್ಲಿ, ವೇದಿಕೆಯು 'ದುಡಿಯುವ ಮಹಿಳೆಯರ ರಾಷ್ಟ್ರೀಯ ಒಕ್ಕೂಟ' ಎಂಬ ಹೆಸರಿನಲ್ಲಿ 1981 ಮಾರ್ಚ್‌ನಲ್ಲಿ ರಿಜಿಸ್ಟ್ರೇಶನ್ ಮಾಡಿಸಿತು.

1984ರ ವೇಳೆಗೆ ವೇದಿಕೆಗೆ, ಮದ್ರಾಸಿನಲ್ಲಿ 34,264 ಜನ ಪೂರ್ಣ (ಕ್ರಿಯಾಶೀಲ) ಸದಸ್ಯರು ಮತ್ತು 2000 ಜನ ನೇಮಕಾತಿ ಸದಸ್ಯರ ಸೇರ್ಪಡೆ ಯಾಯಿತು, ಬ್ಯಾಂಕ್ ಸಾಲ ಪಡೆವ ತಂಡಗಳು ಒಟ್ಟು 700 ನಿರ್ಮಿತವಾದವು. ದಿಂಡಿಗಲ್‌ನಲ್ಲಿ 1196 ಜನ ಸದಸ್ಯರು, ಆದಿರಾಂ ಪಟ್ಟಣಂನಲ್ಲಿ 1957 ಜನ ಸದಸ್ಯರು ನರ್ಸಾಪುರದಲ್ಲಿ 7911 ಜನ ಸದಸ್ಯರು ಸೇರ್ಪಡೆಯಾದರು. ಬೆಂಗಳೂರಿನಲ್ಲಿ 3337 ಜನ ಸದಸ್ಯರು ಮತ್ತು ಬ್ಯಾಂಕ್ ಸಾಲ ಪಡೆವ ತಂಡ 300 ಆಯಿತು. ತಮಿಳುನಾಡಿನಲ್ಲಿ ವ್ಯವಸಾಯದ ಮಹಿಳೆಯರು, ದಿಂಡಿಗಲ್ ಮತ್ತು ಆದಿರಾಂ ಪಟ್ಟಣಂಗಳಲ್ಲಿ ಬೀಡಿ ಕಾರ್ಮಿಕರು ಮತ್ತು ಮೀನುಗಾರಿಕೆ ಮಹಿಳೆಯರು ನರ್ಸಾಪುರದಲ್ಲಿ ಹಗ್ಗನೇಯುವ ಮಹಿಳೆಯರು ವೇದಿಕೆಯ ಸದಸ್ಯೆಯರಾದರು. ಬೆಂಗಳೂರಿನಲ್ಲಿ ಊದು ಬತ್ತಿ ಕೈಗಾರಿಕೆ ಮಹಿಳೆಯರು ವೇದಿಕೆಯ ಸದಸ್ಯೆಯರಾದರು. ಹೀಗೆ, ವೇದಿಕೆ ಅನೇಕರ ಸದಸ್ಯತ್ವದ ಲಾಭ ಪಡೆವಲ್ಲಿ ಯಶೋದಾ ಎಂಬ ಸೊಪ್ಪು ಮಾರುವ ಮಹಿಳೆ ಮತ್ತು ರಾಜೇಶ್ವರಿ ಎಂಬ ತೆಲುಗು ಮಹಿಳೆಯ ಪರಿಶ್ರಮ ಗಮನಾರ್ಹವಾದುದು.

ವೇದಿಕೆ ಸಂಸ್ಥಾತ್ಮಕವಾಗಿ ಬೆಳೆದಾಗ, ವೇದಿಕೆಯ ವ್ಯವಸ್ಥಾಪಕಿ, ಕಾರ್ಯದರ್ಶಿ, ಮೇಲ್ವಿಚಾರಕಿ, ಸಂಚಾಲಕಿ– ಹೀಗೆ ಬೇರೆ ಬೇರೆ ಪ್ರದೇಶಗಳ ವೇದಿಕೆಯ ವಿಭಾಗ–ಉಪ ವಿಭಾಗಗಳಿಗೆ ನೇಮಿಸಲಾಯಿತು.

'ದುಡಿಯುವ ಮಹಿಳೆಯರ ಸಾಲದ ಸಹಕಾರ ಸಂಘ'ವನ್ನು ಸ್ಥಾಪಿಸಲಾಯಿತು. ಈ ಸಹಕಾರ ಸಂಘದಿಂದ, ಅನೇಕ ಮಹಿಳೆಯರು ಸಾಲ ಪಡೆದು ಸಣ್ಣ ಕೈಗಾರಿಕೆಗಳನ್ನು ನಡೆಸತೊಡಗಿದರು.

ಹಲವಾರು ಕೊಳಚೆ ಪ್ರದೇಶಗಳಲ್ಲಿ, ಕುಟುಂಬ ಯೋಜನಾ ಕಾರ್ಯಕ್ರಮಗಳನ್ನೂ, ಸಂಶೋಧನೆ ಹಾಗೂ ತರಬೇತಿ ಕಾರ್ಯಕ್ರಮಗಳನ್ನೂ ನಡೆಸಲಾಯಿತು.

ಕುಟುಂಬ ಯೋಜನಾ ಕಾರ್ಯಕ್ರಮ 1980ರಲ್ಲಿ ಮದ್ರಾಸಿನಲ್ಲಿ ಶುರುವಾಗಿ ದಿಂಡಿಗಲ್, ಆದಿರಾಂ ಪಟ್ಟಣಂ. ಮತ್ತು ವೆಲ್ಲೂರುಗಳಲ್ಲಿ ವ್ಯಾಪಕವಾಗಿ ಬೆಳೆಯಿತು. ಇಲ್ಲಿ ಮಹಿಳೆ ಮತ್ತು ಮಕ್ಕಳ ಆರೋಗ್ಯ ಸುಧಾರಣೆಗೂ ಗಮನಕೊಡಲಾಯಿತು. ಅಲ್ಪಾವಧಿ ಕಾಲದ ಹುಟ್ಟು ನಿಯಂತ್ರಣ, ದೀರ್ಘಕಾಲ ಹುಟ್ಟು ನಿಯಂತ್ರಣ, ಶಾಶ್ವತ ಗರ್ಭ ನಿಯಂತ್ರಣ, ಗರ್ಭ ಧಾರಿಣಿಯರಿಗೆ ಸಲಹೆ-ಸೂಚನೆಗಳು, ಆಗತಾನೇ ಹುಟ್ಟಿದ ಮಕ್ಕಳ ಪಾಲನೆ ಪೋಷಣೆ ಮತ್ತು ಬಾಣಂತಿಯರಿಗೆ ಸಲಹೆ ಸೂಚನೆಗಳು– ಹೀಗೆ ಅನೇಕ ಕಾರ್ಯಗಳನ್ನು ನಡೆಸಲಾಯಿತು. ಮೊದಲನೇ ಹಂತದಲ್ಲಿ 5109 ದಂಪತಿಗಳು, ಎರಡನೇ ಹಂತದಲ್ಲಿ 11906 ದಂಪತಿಗಳು ಶಸ್ತ್ರಚಿಕಿತ್ಸೆ ಮಾಡಿಸಿಕೊಂಡರು.

ಸಂಶೋಧನೆ ಮತ್ತು ತರಬೇತಿ ಕಾರ್ಯಕ್ರಮ ವೇದಿಕೆಯ ಎಲ್ಲಾ ಮಹಿಳೆಯರಿಂದ– ಎಂದರೆ ಸಾಲದ ತಂಡಗಳು ಮತ್ತು ನಾಯಕಿಯರು, ವ್ಯವಸ್ಥಾಪಕಿ, ಮೇಲ್ವಿಚಾರಕಿ ಕಾರ್ಯದರ್ಶಿ– ಹೀಗೆ ಎಲ್ಲರೂ ಸೇರಿ ನಡೆಸಲಾಯಿತು. ಈ ಕಾರ್ಯಕ್ರಮ ನಂದಿನಿ ಆಜಾದ್ ಎಂಬ ಪ್ರತಿಭಾವಂತೆಯ ಸಲಹೆ-ಮಾರ್ಗದರ್ಶನದಿಂದ ಸುಗಮವಾಯಿತು. ರಾತ್ರಿಯ ವೇಳೆ ಶಾಲೆಗಳನ್ನು ನಡೆಸುವುದು ವೇದಿಕೆಯ ಪೂರ್ಣ ಬೆಳವಣಿಗೆಯ ವಿವಿಧ ಭಾಗಗಳನ್ನು ಎಲ್ಲಾ ಜನರಿಗೆ ವಿವರಿಸುವಂಥ ಕರಪತ್ರಗಳನ್ನು ದೇಶದ ಮೂಲೆ ಮೂಲೆಗಳಿಗೂ ಹಂಚುವುದು. ಎಲ್ಲಾ ಸಣ್ಣ ಕೈಗಾರಿಕೆ, ಸಣ್ಣ ಪ್ರಮಾಣದ ವ್ಯಾಪಾರಗಳಿಗೆ ಸಂಬಂಧಿಸಿದಂತೆ ಸಾಮಾಜಿಕ-ಆರ್ಥಶಾಸ್ತ್ರವನ್ನು ಅಧ್ಯಯನ ಮಾಡುವುದು, ಬಾಲ ಕಾರ್ಮಿಕರ ಬಗ್ಗೆ ಅಧ್ಯಯಿಸುವುದು, ಕಡಿಮೆ ಆದಾಯದ ಮಹಿಳೆಯರು ಎದುರಿಸುವ ವರದಕ್ಷಿಣೆ ಬೇಡಿಕೆ ಬಗ್ಗೆ ಹೆಚ್ಚು ವಿವರವಾಗಿ ತಿಳಿಯುವುದು– ಮುಂತಾದ ವಿಚಾರಗಳನ್ನು ಸಂಶೋಧನೆಗೆ ತೆಗೆದುಕೊಳ್ಳಲಾಯಿತು.

ತುಂಬಾ ಶೋಚನೀಯ ಸ್ಥಿತಿಯಲ್ಲಿದ್ದ, ಹೊಲಗಳಲ್ಲಿ ಕೆಲಸ ಮಾಡುತ್ತಿದ್ದ ಮಹಿಳೆಯರಿಗೆ, ಕುರಿ– ಹಸು ಸಾಕಾಣಿಕೆ ಮತ್ತು ಹೈನುಗಾರಿಕೆಗಳ ಸ್ವಂತ ಉದ್ಯೋಗಗಳನ್ನು ವೇದಿಕೆಯಿಂದ ಹಾಕಿಕೊಡಲಾಯಿತು. ಹಲವಾರು ಕಡೆ, ಕಡಿಮೆ ವೇತನ ಪಡೆಯುವ ಮಹಿಳೆಯರು, ತುಂಬಾ ಶೋಷಣೆಗೊಳಗಾಗುವ

ಮಹಿಳೆಯರೂ– ಇವರ ಪರವಾಗಿ ಸಂಘಟನೆಯಿಂದ ಪ್ರತಿಭಟಿಸಲಾಯಿತು.

ಹಗ್ಗ ಹೆಣೆಯುವುದು, ಬೀಡಿ ಮತ್ತು ಊದು ಕಡ್ಡಿ ತಯಾರಿಸುವುದು, ಮುಂತಾದ ಸಣ್ಣ ಕೈಗಾರಿಕೆಗಳಿಗಾಗಿ ಸಹಕಾರ ಸಂಘಗಳನ್ನು ಸ್ಥಾಪಿಸಲಾಯಿತು.

ವೇದಿಕೆಯಲ್ಲಿರುವ ಅನೇಕ ತಂತ್ರಜ್ಞಾನದ ಒಲವುಳ್ಳ ಮಹಿಳೆಯರಿಗಾಗಿ ತಾಂತ್ರಿಕ ಶಿಕ್ಷಣ ಸಂಸ್ಥೆಗಳನ್ನೂ, ತರಬೇತಿ ಕೇಂದ್ರಗಳನ್ನೂ ಸ್ಥಾಪಿಸಲಾಯಿತು.

ವೇದಿಕೆಯ ಬಗ್ಗೆ ಹೆಚ್ಚು ಜ್ಞಾನವಿರದ ಹಲವು ಹಳ್ಳಿಗಳಲ್ಲಿನ ಜನರು ವೇದಿಕೆಯ ಕಾರ್ಯಚಟುವಟಿಕೆಗಳ ಬಗ್ಗೆ ತಪ್ಪು ಗ್ರಹಿಕೆಯಿಂದ ಮತ್ತು ಹಲವಾರು ಸಂಶಯಗಳಿಂದ ಕಂಡರು. ಅಂಥ ಕಡೆಗಳಲ್ಲಿ ಸರಿಯಾದ ತಿಳುವಳಿಕೆ ನೀಡಲು ಮತ್ತು ಸಂಶಯ ನಿವಾರಿಸಲು ವೇದಿಕೆ ಹೆಚ್ಚು ಹೆಚ್ಚು ಸಭೆಗಳನ್ನು ನಡೆಸತೊಡಗಿತು. ಹಳ್ಳಿಗಳಲ್ಲಿ ವರದಕ್ಷಿಣೆ ಪಿಡುಗಿಗೆ ಸಿಕ್ಕುನೊಂದ ಮಹಿಳೆಯರು, ಗಂಡನ ಸಂಶಯದೀದ ಮತ್ತು ಪರಸ್ತ್ರೀ ಸಹವಾಸದಿಂದ ನೊಂದ ಮಹಿಳೆಯರು, ವೈಧವ್ಯದಿಂದ ಹಲವಾರು ಅಪಮಾನ ಸಹಿಸಿದ ಮಹಿಳೆಯರು, ಅತ್ಯಾಚಾರಕ್ಕೊಳಗಾಗಿ ಮುಖಿಸಿದ ಮಹಿಳೆಯರು, ಆರ್ಥಿಕ ಬಿಕ್ಕಟ್ಟು– ನಿರುದ್ಯೋಗಗಳೀದ ನೊಂದ ಮಹಿಳೆಯರು– ಎಲ್ಲಾ ಮಹಿಳೆಯರೂ ವೇದಿಕೆಯಲ್ಲಿ ಬೆಳಕು ಕಂಡರು. ಸ್ವಂತ ಉದ್ಯೋಗದಿಂದ ಹೊಸಬಾಳು ಬದುಕುತ್ತಿದ್ದಾರೆ. ಅನೇಕರು ವೇದಿಕೆಗೆ ಪೂರ್ಣಕಾಲ ದುಡಿದು, ವೇದಿಕೆಯ ಏಳಿಗೆಗೆ, ವಿಸ್ತರಣೆಗೆ ಹೆಚ್ಚು ಶ್ರಮವಹಿಸುತ್ತಿದ್ದಾರೆ.

ಇಂದಿಗೂ ಭಾರತಾದ್ಯಂತ ವೇದಿಕೆ ಬೆಳೆಯುತ್ತಿದೆ; ಸಾವಿರಾರು ಸಂಖ್ಯೆಯಲ್ಲಿ ಮಹಿಳೆಯರು ದಿನದಿನಕ್ಕೂ ಸದಸ್ಯೆಯರಾಗುತ್ತಿದ್ದಾರೆ.

## ಮಹಿಳಾ ಸಮಸ್ಯೆಗಳತ್ತ ಗಮನ ಹರಿಸಿರುವ ಇಟಲಿ ಟ್ರೇಡ್ ಯೂನಿಯನ್

1968ರಲ್ಲಿ ಇಟಲಿಯಲ್ಲಿನ ಮಹಿಳಾ ಸಂಘಟನೆಗಳು ಎಡಪಂಥೀಯ ಚಳುವಳಿ ಹಾಗೂ ಕಾರ್ಮಿಕ ಚಳುವಳಿಯಲ್ಲಿ ಹೆಚ್ಚು ಹೆಚ್ಚು ಕ್ರಿಯಾತ್ಮಕವಾಗಿ ಭಾಗವಹಿಸತೊಡಗಿದವು. ಇದು ಮಹಿಳೆಯರ ವಿಶಿಷ್ಟ ಸಮಸ್ಯೆಗಳನ್ನು ಚರ್ಚಿಸಲು ವೇದಿಕೆಯನ್ನು ಸೃಷ್ಟಿಸಿತು. ಇಂತಹ ಚರ್ಚೆಗಳು ಲೈಂಗಿಕ ಆಧಾರಿತ ಶ್ರಮ ವಿಭಜನೆಯನ್ನು, ಅದರ ವಿವಿಧ ಮುಖವನ್ನು ಅರ್ಥ ಮಾಡಿಕೊಳ್ಳಲು ಪೂರಕವಾನಿದ್ದವು.

1968ರಕ್ಕಿಂತ ಮೊದಲು ಮಹಿಳಾ ಸಂಘಟನೆಗಳು ಮೊದಲು ಮಹಿಳಾ ಪ್ರಶ್ನೆಗಳನ್ನು ಎತ್ತಿತ್ತು. ಎತ್ತಿದ್ದರ ಪರಿಣಾಮ ಟ್ರೇಡ್ ಯೂನಿಯನ್‌ಗಳ ಮೇಲೆ ಸುಲಭವಾಗಿ ಉಂಟಾಯಿತು. ಆದರೆ ಈ ಪರಿಣಾಮದ ಅಳವನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಾದದ್ದು, ಟ್ರೇಡ್ ಯೂನಿಯನ್‌ಗಳು ಹಮ್ಮಿಕೊಂಡ ಕಾರ್ಯಕ್ರಮದಿಂದಾಗಿ. ಗರ್ಭಪಾತ, ಲೈಂಗಿಕ ಹಿಂಸೆ ಮುಂತಾದ ಸಮಸ್ಯೆಗಳ ಬಗ್ಗೆ ಯೂನಿಯನ್‌ಗಳು ಚಳುವಳಿಯನ್ನೇ ಕ್ರಮೇಣ ಪ್ರಾರಂಭಿಸಿದವು.

ಟ್ರೇಡ್ ಯೂನಿಯನ್‌ನಲ್ಲಿರುವ ಮಹಿಳೆಯರು ಇನ್ನು ಹಲವಾರು ಪ್ರಗತಿ ಪರ ಬೇಡಿಕೆಗಳನ್ನು ಮುಂದಿಡುತ್ತಿದ್ದಾರೆ. ಸ್ತ್ರೀಯರ ಸಮಸ್ಯೆಗಳ ಚರ್ಚೆಗಳಲ್ಲಿ ಪುರುಷರು ಭಾಗವಹಿಸುವುದಕ್ಕಾಗಿ ಅವರಿಗೆ ಒಂದು ವರ್ಷಕ್ಕೆ 200 ಗಂಟೆಗಳ ವೇತನ ಸಹಿತ ರಜೆ. ಕಾಯಿಲೆಯಿಂದ ನರಳುತ್ತಿರುವ ಮಕ್ಕಳನ್ನು ನೋಡಿಕೊಳ್ಳಲು ತಂದೆ ತಾಯಿಗಳಿಗಿಬ್ಬರಿಗೂ ಒಂದು ವರ್ಷಕ್ಕೆ 40 ಗಂಟೆಗಳ ವೇತನ ಸಹಿತ ರಜೆ ಮುಂತಾದ ಬೇಡಿಕೆಗಳಿಗಾಗಿ ಕಾರ್ಮಿಕರು ಹೋರಾಡುತ್ತಿದ್ದಾರೆ. ಇದು ಕಾರ್ಮಿಕರ ಸಾಮಾಜಿಕ ಪ್ರಜ್ಞೆಯನ್ನು ಉತ್ತಮಗೊಳಿಸುವುದರ ಜೊತೆಯಲ್ಲಿ, ಕಾರ್ಮಿಕರು ಉತ್ಪಾದನೆ, ಅದರ ವ್ಯಾಪ್ತಿ, ಸಮಗ್ರತೆಯನ್ನು ಅರ್ಥಮಾಡಿಕೊಳ್ಳಲು ಇದು ಪೂರಕವಾಗಿದೆ.

ಸಾಂಪ್ರದಾಯಿಕ ಎಡಪಂಥಿಯ ಪಕ್ಷಗಳು, ಯೂನಿಯನ್‌ಗಳು ಸ್ತ್ರೀಯರ ಸಮಸ್ಯೆಗಳನ್ನು ತಮ್ಮ ಸಂಪ್ರದಾಯಿಕ ತಾಂತ್ರಿಕ ನಿಲುವಿನಿಂದಾಗಿ ನಿರ್ಲಕ್ಷಿಸಿದ್ದವು. ಟ್ರೇಡ್ ಯೂನಿಯನ್ ಮತ್ತು ಎಡಪಂಥಿಯ ಪಕ್ಷವನ್ನು ಬಲಗೊಳಿಸಬಹುದಾದಂತಹ ಈ ಪ್ರಶ್ನೆಗಳು ಘರ್ಷಣೆಯ ಮೂಲವಾಗಿವೆ. ಆದರೆ 1968ರಲ್ಲಿ ಪರಿಸ್ಥಿತಿ ಬದಲಾಯಿತು. ವಿದ್ಯಾರ್ಥಿನಿಯರು ವಿವಿಧ ಹಿನ್ನೆಲೆಯಿಂದ ಬಂದ ಮಹಿಳೆಯರು, ಮಹಿಳಾ ಕಾರ್ಮಿಕರು ಎಡಪಂಥೀಯ ಚಳವಳಿಯಲ್ಲಿ ಭಾಗವಹಿಸಿದ್ದರು. ಮಹಿಳಾ ಸಂಘಟನೆಗಳು ಎತ್ತಿದ್ದ ಪ್ರಶ್ನೆಗಳನ್ನು ಈ ಯುವಜನತೆ ಸ್ವೀಕರಿಸಿತು. ಕೌಟುಂಬಿಕ ಜವಾಬ್ದಾರಿ ದುಡಿಮೆ ದ್ವಿಮುಖ ಜವಾಬ್ದಾರಿಗಳನ್ನು ಸ್ತ್ರೀಯರೇ ವಹಿಸಿಕೊಳ್ಳಬೇಕಾದ್ದರಿಂದ. ವೈಯಕ್ತಿಕವಾಗಿ ಈ ಪ್ರಶ್ನೆಗಳು ಮಹತ್ವದ ಸ್ಥಾನವನ್ನು ಪಡೆದವು. ಉತ್ಪಾದನಾ ಹಂತದಲ್ಲಿ ಸ್ತ್ರೀಯರ ಪಾತ್ರವನ್ನು ನಿಷ್ಕ್ರಿಯಗೊಳಿಸುವ ಕೌಟುಂಬಿಕ ಜವಾಬ್ದಾರಿಗಳ ಬಗ್ಗೆ ಇಟಲಿಯ ಟ್ರೇಡ್ ಯೂನಿಯನ್‌ಗಳು ತಳೆದಿರುವ ನಿಲುವುಗಳು ಪ್ರತಿಯೊಂದು ದೇಶಕ್ಕೂ ಮಾದರಿಯಾವು.ಗತಕ್ಕವು.

# ಗೀತಾಂಜಲಿಯ ಹಲವು ಪದ್ಯಗಳು

ಕನ್ನಡಕ್ಕೆ : **ಪಾರ್ವತಿ ಬಾಳಿಕೆ**

ಕವಯತ್ರಿಯಿ ಕುರಿತು...

ಹದಿನಾರರ ಎಳೆವಯಸ್ಸಿನಲ್ಲಿ ಕ್ಯಾನ್ಸರ್‌ನಂತಹ ಭಯಂಕರ ರೋಗದಿಂದ ಪರಳಿ ತೀರಿಕೊಂಡ ಪ್ರತಿಭಾವಂತ ಯುವ ಕವಯಿತ್ರಿ ಗೀತಾಂಜಲಿ. ಮುಂಬಯಿಯ ಫೋರ್ಟ್ ಕಾನ್ವೆಂಟಿನಲ್ಲಿ ಓದುತ್ತಿದ್ದ ಆಕೆಗೆ ಕ್ಯಾನ್ಸರ್ ತಗುಲಿದೊಡನೆ ಶಾಲೆಯನ್ನು ಬಿಟ್ಟು ಆಸ್ಪತ್ರೆ ಸೇರಬೇಕಾಗಿ ಬಂತು. ರೋಗವು ಸ್ವಲ್ಪ ಶಮನಗೊಂಡಾಗ ಆಸ್ಪತ್ರೆಯಿಂದ ಮನೆಗೂ, ಉಲ್ಬಣಿಸಿದಾಗ ತಿರುಗಿ ಆಸ್ಪತ್ರೆಗೂ ಹೋಗಿಬರುತ್ತ ಹಲವಾರು ತಿಂಗಳುಗಳನ್ನು ದೂಡಿದ ಗೀತಾಂಜಲಿಯನ್ನು 1977, ಆಗಸ್ಟ 11 ರಂದು ಕ್ಯಾನ್ಸರ್ ಬಲಿತೆಗೆದುಕೊಂಡಿತು. ಆಕೆಯ ಮರಣಾನಂತರವೇ ಆಕೆಯ ಹಿರಿಯರಿಗೆ ಗೊತ್ತಾಗಿದ್ದು ಗೀತಾಜಲಿಗೆ ಮೊದಲಿಂದಲೇ ತನ್ನ ವಿಧಿಯ ಅರಿವಿತ್ತೆಂದು, ಮನೆಯಲ್ಲಿ ಆಕೆಯ ಕೋಣೆಯಲ್ಲಿ ಹಾಗೂ ಆಸ್ಪತ್ರೆಯಲ್ಲಿ ಆಕೆಯಿದ್ದ ಕ್ಯಾಬಿನ್‌ನಲ್ಲಿ ಅಕೆ ತುಣುಕು ಕಾಗದಗಳಲ್ಲಿ ಗೀಚಿದ ಕವನಗಳು ಕಾಣಸಿಕ್ಕಿದವು. ಈಗ ಅಂತಹ ಸುಮಾರು ನೂರು ಕವನಗಳು ಹಾಸಿಗೆಯ ಅಡಿಯಲ್ಲಿ, ಕಪಾಟನೊಳಗೆ, ಡ್ರಾವರ್‌ದಲ್ಲಿ, ಇನ್ನೂ ಹಲವಾರು ಎಡೆಗಳಲ್ಲಿ ಅಡಗಿಸಿಟ್ಟದ್ದು ಕಾಣಸಿಕ್ಕಿ ಬೆಳಕಿಗೆ ಬಂದಿವೆ. ಅವೆಲ್ಲವನ್ನು ಒಟ್ಟುಮಾಡಿ ಖ್ಯಾತ ಪತ್ರಕರ್ತ ಪ್ರೀತೀಶ್‌ನಂದಿಯವರು ಈಗಾಗಲೇ ಗೀತಾಂಜಲಿಯ ಕವನ ಸಂಕಲನವೊಂದನ್ನು ಪ್ರಕಟಿಸಿದ್ದಾರೆ. ಅವುಗಳಲ್ಲಿ ಎಷ್ಟೋ ಕವನಗಳು ಬೇರೆ ಬೇರೆ ಭಾಷೆಗಳಿಗೆ ಅನುವಾದಿಸಲ್ಪಟ್ಟಿವೆ.

## ಕಾದಿರುವೆ ನಿನಗಾಗಿ

ಒಂಥರಾ ವಿಚಿತ್ರ
ಉಸಿರುಗಟ್ಟುವಿಕೆ.
ಕಾರಣವಂತೂ
ಇನ್ನಷ್ಟು ವಿಚಿತ್ರ.
ಸಾಕಷ್ಟು ಆಸೆಗಳೊಂದಿಗೆ,
ಮಿಶ್ರ ಭಾವನೆಗಳೊಂದಿಗೆ
ನಾನು ನಿನಗಾಗಿ ಕಾಯುತ್ತಿರುವುದು.
ನೀನು ಹಿಂತಿರುಗಿ ಬರುವೆಯೋ
ಅಥವಾ ಒಳ್ಳೆಯದಕ್ಕಾಗಿಯೇ
ನಿನ್ನ ಬೆನ್ನು ತಿರುಗಿಸುವೆಯೋ
ನನಗರಿಯದು.
ಆದರೂ
ಕಾದಿರುವೆ ನಾನು ನಿನಗಾಗಿ.



## ಸಂತೋಷ

ಸಂತೋಷ
ನಿನ್ನನ್ನು ಹುಡುಕುತ್ತ ನಿಂತು
ಬಹಳ ಹೊತ್ತಾಯಿತು,
ಒಮ್ಮೆ ನಾನಿದ್ದಲ್ಲೇ ನೀನೂ ಇದ್ದಿ,
ಈಗ
ನನಗೆಟುಕದ ಎತ್ತರದಲ್ಲಿರುವೆ,
ದಯವಿಟ್ಟು ಹೇಳು
ಇದನ್ನು ಪಡೆಯಲು ನಾನೇನು ಮಾಡಿರುವೆ ?

ನೀನು ಬರೇ ಒಂದು
ಕ್ಷಣಕ್ಕಾಗಿಯಾದರೂ
ತಂಗಾಳಿಯಂತೆ ಬಂದರೆ, ಬಂದಾಗ
ನನ್ನ ಕಣ್ಣುಗಳ ಕಿಟಕಿಯಿಂದ
ಹೃದಯವುಕ್ಕಿದ ಅನುಭವ
ಏಕೆಂದರೆ ನೀನು ನನಗೆ ಕೊಡುವುದು
ಅಲ್ಪಾವಧಿಯ ಸಂದರ್ಶನ
ಅದರ ಅರಿವಾಗುವ ಮೊದಲೇ
ನೀನು ಹೋಗುವೆಯೆಂದು
ನನಗೆ ಗೊತ್ತು.

ಸಂತೋಷ
ನೀನಿಲ್ಲದೆ
ಉದ್ದಕ್ಕೂ ಏನೋ ಶೂನ್ಯತೆ
ಮುಂದಿನ ಬಾರಿ
ಹೆಚ್ಚು ಉದಾರಿಯಾಗುವ
ನಿರ್ಧಾರ ಮಾಡು.
ಸ್ವಲ್ಪ ದೀರ್ಘಕಾಲ ಇದ್ದು ಬಿಡು,
ಹಳೆಯ ಸಂಬಂಧದ
ಸಲುವಾಗಿಯಾದರೂ.
ನನ್ನಿಂದ ಅಗಲಿದ ಮೇಲೆ
ದಯವಿಟ್ಟು ಹಿಂತಿರುಗಬೇಡ ;
ನಿದ್ರಿಸುತ್ತಿರುವ ನನ್ನ ಕನಸುಗಳನ್ನು
ಎಚ್ಚರಿಸಲು ಬರಬೇಡ.

# ನಾನು ಒಂಟಿಯಾಗಿ ನಡೆಯುತ್ತಿರುವೆ

ಇಂದು ರಾತ್ರಿ ಎಂದಿನಂತೆಯೇ,
ಭಯದ ಕಂದರದುದ್ದಕ್ಕೂ,
ಒಂಟಿಯಾಗಿ ನಡೆಯುತ್ತಿರುವೆ ನಾನು
ಓ ದೇವರೇ ! ನೀನು ಕೇಳು
ತ್ತಿರುವಿಯೆಂದು ಬೇಡುತ್ತಿದ್ದೇನೆ :
ಏಕೆಂದರೆ ನನ್ನ ಹೃದಯದಲ್ಲೇನಿದೆಯೆಂಬುದು
ನಿನಗೆ ಮಾತ್ರ ಗೊತ್ತು.
ಈ ನಿರಾಶೆಯ ಕಂದರದಿಂದ ಎತ್ತಿ
ನನ್ನ ಆತ್ಮವನ್ನು ಬಿಡುಗಡೆಮಾಡು.
ನನ್ನ ಆತ್ಮವನ್ನೆತ್ತಿ
ಯಾವುದೂ ಮುಟ್ಟಲಾಗದಷ್ಟು ಎತ್ತರ
ದಲ್ಲಿರಿಸಲು ಪ್ರಯತ್ನಿಸುತ್ತಿರುವೆ.
ನನ್ನ ವಿಶ್ವಾಸ, ನಿಷ್ಠೆ, ಆತ್ಮ-ಎಲ್ಲವೂ
ಗಾಸಿಗೊಂಡಿವೆ, ನಜ್ಜುಗುಜ್ಜಾಗಿವೆ.
ನನ್ನ ಗಳಿಗೆ ಸಮೀಪಿಸಿದಾಗ
ನಾನು ಭಯಪಡಲಾರೆ.
ಏಕೆಂದರೆ ನನಗೆ ಗೊತ್ತು
ನಿನ್ನ ತೀರ್ಪು ಕರುಣೆಯ ಲೇಪದಿಂದ
ಮೆದುವಾಗಿರುತ್ತದೆಯೆಂದು.
ಏಷ್ಟಾದರೂ ನಾನು ಬರೇ ಜೇಡಿಮಣ್ಣು,
ಒಂದು ದಿನ ನಾನು
ಹಿಂತಿರುಗುವೆ...
ಮಣ್ಣಿನಿಂದ ಬಂದೆ,
ಮಣ್ಣನ್ನೇ ಸೇರುವೆ,



## ಭೂತ ಮತ್ತು ವರ್ತಮಾನ

ಭೂತ-ವರ್ತಮಾನಗಳನ್ನು
ದೃಷ್ಟಿಯಲ್ಲಿಟ್ಟು
ಸಂತೋಷ-ದುಃಖಗಳನ್ನು
ಸರದಿಯಲ್ಲಿ ತೂಗಿ ನೋಡಿದೆ.
ಸಂದ ವರ್ಷಗಳಲ್ಲಿ
ನನ್ನ ಮೇಲೆ
ವಿಧಾತ ತೋರಿಸಿದ ಕರುಣೆಯ
ನೆನಪಾದಾಗ
ತಲೆ ಸುತ್ತಿ ಬರುತ್ತದೆ
ನಿಜವಾಗಲೂ, ಆತನಲ್ಲಿ
'ಏಕೆ ? ದೇವರೇ, ಏಕೆ ?'
ಎಂದು ಪ್ರಶ್ನಿಸುವ ಬಗ್ಗೆ
ನಾಚಿಕೆ ಎನಿಸುತ್ತದೆ
ಕೊನೆಗೂ ನಾನು ಅಂಗೀಕರಿಸಿದೆ
ಆತನ ಇಚ್ಛೆ
ಶರಣಾದೆ ನಾನು ನನ್ನ ವಿಧಿಗೆ
ನನ್ನೆಲ್ಲ ನಿಷ್ಠೆ-ನಂಬುಗೆಗಳನ್ನು
ಇಟ್ಟಿರುವೆ ನಾನು ಆತನಲ್ಲಿ.

## ನೋವಿನ ಆಳವಾದ ಅಲೆಗಳು

ನನ್ನ ಹೃದಯದ
ಅಂತರಾಳದಲ್ಲಿ ಹರಿಯುತ್ತಿವೆ
ನೋವಿನ ಆಳವಾದ ಅಲೆಗಳು,
ನನ್ನ ಭಾವನೆಗಳನ್ನಡಗಿಸಲು
ಎಷ್ಟು ಪ್ರಯತ್ನಿಸಿದರೂ
ತುಳುಕಿ ಚೆಲ್ಲುತ್ತವೆ ಕೆಲವೊಮ್ಮೆ.
ನನ್ನ ಆಶಾಕಿರಣಗಳಿಗಿಂದು
ಕಾಂತಿಯಲ್ಲ.
ಉಜ್ವಲ ನಾಳೆ ಯೋಚನೆಗಳು
ನನ್ನ ವ್ಯಥೆಯನ್ನು ಕಂಡು
ಅಣಕವಾಡುತ್ತಿವೆ.
ನನ್ನ ದಣಿದ ಮನವನ್ನು
ಬೆದರಿಸುತ್ತಿವೆ.
ನನ್ನ ಆತ್ಮದೊಳಗೆ ಚುಚ್ಚುತ್ತಿರುವ
ಶೂನ್ಯತೆಯು
ಶಾಂತವಾಗಿ ಪಿಸುಗುಟ್ಟುತ್ತಿದೆ ;
ಶಾಂತಿ ಸಿಗಲಿ ಎಂದು.

# ಸಾವಿನ ಗಳಿಗೆಯಲ್ಲಿ

ಸಾವಿನ ಗಳಿಗೆಯಲ್ಲಿ
ಕಾಲ
ನಿಧಾನವಾಗಿ ಚಲಿಸುತ್ತಾನೆ ;
ಭಾವವೆಗಳ ನೂಕು-ನುಗ್ಗಲಿನಲ್ಲಿ
ಸವೆದು ಹೋದ, ನುಚ್ಚುನೂರಾದ
ಹೃದಯದ ತಂತಿಗಳನ್ನು
ಬಲವಾಗಿ ಹಿಡಿದೆಳೆಯುತ್ತಾನೆ.



ನೋವಿನ ಹೊರೆಯಿಂದ
ಅಸಹನೀಯ ವೇದನೆ
ಇದುವರೆಗೆ ಅದುಮಿಟ್ಟ
ಸಂಕಟ-ನಿರಾಶೆಗಳು ಚಿಮ್ಮಲು
ಸಿದ್ಧವಾಗಿ
ಅಂಚಿನಲ್ಲಿ ತುಂಬಿ ನಿಂತಿದ್ದರೂ
ಇನ್ನೂ ಸುರಿಸದ ಕಣ್ಣೀರಿನ
ರಕ್ತ ದ್ವಾರಗಳನ್ನು
ಮುಚ್ಚಿಯೇ ಇಟ್ಟಿರುವೆ.

ಕಾಣದ ಕೈಗಳು
ನಿಶ್ಚಯಿಸಿದ ಗಳಿಗೆಯನ್ನು
ತಡೆಯಲಾರದ
ನಿಸ್ಸಹಾಯಕರು ;
ಮೌನವಾಗಿ ಆತನ
ಇಚ್ಛೆಯನ್ನು
ಅನುಸರಿಸುತ್ತೇವೆ.

## ನೊಂದ ಆತ್ಮಾಭಿಮಾನ

ಎಳೆಯ ವಯಸ್ಸು
ಭಾವನೆಗಳೂ ಕೋಮಲ.
ಯಾರಾದರೂ ಅವುಗಳ ಮೇಲೆ
ಕಾಲಿಟ್ಟು ನಡೆದರೆಂದರೆ
ಎದೆಯೊಡೆದಂತಹ ಅನುಭವ.
ವಿಚಾರ ಸ್ವಾತಂತ್ರ್ಯದ
ಕನಸುಗಳು
ಬಿರಿದು ಬೊಬ್ಬಿಡುವ ಮುನ್ನ
ಎಚ್ಚರದ ಗಳಿಗೆಗಳ ಸುತ್ತ
ತನಗೆ ತಾನೇ ಆವರಿಸುತ್ತದೆ ನೋವು.
ತಾರುಣ್ಯ, ಸೌಂದರ್ಯ ಮತ್ತು
ಮುಗ್ಧತೆ ;
ಈ ಮೂರೂ
ಒಂದರೊಡನೊಂದು ಸೇರಿ
ವಿಧಿ ಮತ್ತು
ಘಾಸಿಗೊಂಡ ಅಭಿಮಾನಗಳೆದುರಿಗೆ
ಪುಡಿಪುಡಿಯಾದಂತೆ...

## ನಿರ್ಣಯದ ದಿನ

ನನ್ನ ಮುಂದೆ ಎಷ್ಟೊಂದು
ಕಡಿಮೆ ಸಮಯ
ಉಳಿದಿತ್ತೆಂದು
ಮೊದಲಬಾರಿ ನನ್ನರಿವಿಗೆ
ಬಂದಿತ್ತು.
ಆ ಹೊಡೆತ ಎಷ್ಟು
ಯಾತನೆ ಕೊಟ್ಟಿತ್ತೆಂದರೆ
ವಿಧಿಯಿಲ್ಲದೆ ನನ್ನ
ನೋವನ್ನೆಲ್ಲ ಬದಿಗಿರಿಸಿ
ನನ್ನನ್ನೂ ನನ್ನ ವಿಶ್ವಾಸವನ್ನೂ
ವಿಧಾತನ ಹಸ್ತಗಳಲ್ಲಿರಿಸಿದೆ
ಪ್ರಿಯ ಗೆಳೆಯರೇ,
ನನಗಾಗಿ ಚಿಂತಿಸದಿರಿ
ಏಕೆಂದರೆ ನಾನು
ಎಲ್ಲ ನೋವುಗಳನ್ನು
ಮೀರಿ ನಿಂತಿರುವೆ ; ಮತ್ತು
ಆತುರದಿಂದ
ಅಂತಿಮ ನಿರ್ಣಯದ ದಿನಕ್ಕಾಗಿ ಕಾಯುತ್ತಿರುವೆ.

# ಹಕ್ಕಿಯೊಂದು ಹಾಡುವುದನ್ನು ಕೇಳಿದೆ



ಇದ್ದಕ್ಕಿದ್ದಂತೆ
ಮಳೆಸುರಿಯಿತು ನಿನ್ನೆ ರಾತ್ರಿ.
ಹೊರಗೆ ಹಕ್ಕಿಯೊಂದು ಹಾಡುವುದನ್ನು
ಕೇಳಿದೆ ನಾನು,
ನನ್ನ ಗೆಳೆಯಾ, ನಿನ್ನ ಭಾಷೆ
ಅರ್ಥಮಾಡಿಕೊಳ್ಳಲಾಗಿದ್ದಿದ್ದರೆ
ಎಷ್ಟು ಚೆನ್ನಾಗಿತ್ತು ಅನ್ನಿಸುತ್ತಿದೆ.
ರಾತ್ರಿಯೆಲ್ಲ ಬೀಸುತ್ತಿದ್ದ
ಶೀತಗಾಳಿಯಿಂದ,
ಗೂಡು ಬೆಚ್ಚಗಿರಲಿಲ್ಲವೆಂದೇ
ಸಂಗಾತಿಯನ್ನು ಕೂಗುತ್ತ
ಹಾಡುತ್ತಿದ್ದಿರಬೇಕು ನೀನು.
ಹಾಡುನಿಂತು, ಬಹಳ ಹೊತ್ತಿನ ಮೇಲೆ
ಯೋಚಿಸಿದೆ ನಾನು ನಿನ್ನ ಬಗ್ಗೆ.
ನಿನ್ನ ಹಾಡು ಸಂತೋಷದ ದ್ಯೋತಕವೇ,
ಅಥವಾ ದುಃಖ ಸೂಚಕವೇ
ಎಂದು ಸೋಜಿಗಪಟ್ಟೆ.
ಆದರೆ ಗೆಳೆಯನೇ, ನಿನ್ನಿಂದ
ಒಂದು ಪಾಠ ಕಲಿತಿರುವೆ ;
ಬರೇ ಅಸ್ಪಷ್ಟತೆಗಾಗಿ, ಹಾಡುವುದನ್ನು
ಏಕೆ ನಿಲ್ಲಿಸಬೇಕೆಂದು.
ಹಾಡು ಬಿರುಗಾಳಿಯನ್ನು
ಶಾಂತಗೊಳಿಸಬಹುದು ;
ಬರೇ ಸಂತೋಷಕ್ಕಾಗಿ
ಜಾಗ ಉಳಿಸುತ್ತ
ನನ್ನ ಭಯ-ಸಂದೇಹಗಳನ್ನು
ಚದುರಿಸಲು ಸಹಕರಿಸಲೂಬಹುದು.

## ಜೀವನ

ಜೀವನ,
ನಾವಿಬ್ಬರೂ ಅಗಲುವುದೆಂದು
ನನಗೆ ತಿಳಿಯದು.
ಯಾವಾಗ, ಎಲ್ಲಿ, ಹೇಗೆ
ನಾನರಿಯೆ.
ನಾವು ವಿದಾಯ
ಹೇಳೋಣ.
ಇದುವರೆಗೆ ಒಳ್ಳೆಯ
ಗೆಳೆಯರಾಗಿದ್ದೆವು
ನಾವಿಬ್ಬರೂ ;
ಅಗಲುವುದು ಕಷ್ಟವೆನಿಸುವುದು.
ನನ್ನನ್ನು ಕಳಕೊಂಡು
ಬೇಸರ ಪಡುವೆಯಾ ನೀನು
ಜೀವನ
ಹಳೆಯ ದಿನಗಳನ್ನು, ಕಳೆದ ಸಮಯವನ್ನು
ನಾವು ಹಂಚಿಕೊಂಡ
ಆ ಎಲ್ಲ ಬೆಚ್ಚನೆಯ ಸುಖ, ಪ್ರೀತಿ,
ಎಲ್ಲ ಕೋಮಲ ಭಾವನೆಗಳನ್ನು
ನೆನಪಿಸಿಕೊಳ್ಳುವೆಯಲ್ಲ ?
ಮತ್ತು ಒಂದುವೇಳೆ
ನಾವು ತಿರುಗಿ ಭೇಟಿಯಾದರೆ
ನನ್ನ ಪ್ರೀತಿಯನ್ನು
ತಿರುಗಿ ಬೆಳಗಿಸುವೆಯಾ ?



## ವಿದಾಯ

ನೀನು ಹೇಳಲಿಲ್ಲ ನನಗೆ
ವಿದಾಯ
ನೋಡಲಿಲ್ಲ ನೀನು ನನ್ನ
ಕಣ್ಣುಗಳಲ್ಲಿ.
ಕೇವಲ ಹಿಂದಡಿಯಿಟ್ಟೆ ನೀನು,
ಹಿಡಿದಿದ್ದಂತೆ ನಾನು ಬಿಗಿಯಾಗಿ.
ಉಸಿರು.
ನುಸುಳಿ ಬಿಟ್ಟೆ ನೀನು
ಅರಣ್ಯದೊಳಗೆ
ನನ್ನನ್ನು ಇಲ್ಲೇ ಬಿಟ್ಟು.
ಒಂದು ಹನಿ ಕಣ್ಣೀರು,
ನಿಟ್ಟುಸಿರೂ ಇಲ್ಲದೆ.

# ಮಾನವಿ

- ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.
- ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ.
- ಮಹಿಳೆಯರೊಂದಿಗೆ ಆತ್ಮೀಯ, ಅರ್ಥಪೂರ್ಣ ಸಂವಾದಕ್ಕಾಗಿ.
- ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

**ವಿಳಾಸ :** "ಮಾನವಿ"
ನಂ. 6455/2-ಎಲ್, ಮಹಡಿ
ಮಾರುತಿ ಕಲ್ಯಾಣ ಮಂಟಪ
ಬಾಣಸವಾಡಿ ಮುಖ್ಯ ರಸ್ತೆ,
ಮಾರುತಿ ಸೇವಾನಗರ ಅಂಚೆ
ಬೆಂಗಳೂರು-560 033.

**ಸೂಚನೆ :** ವಾರ್ಷಿಕ ಚಂದಾ 15ರೂ.
ಆಜೀವ ಚಂದಾ : 250ರೂ.
ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಏಳು ಸಂಚಿಕೆಗಳು
ಹಣವನ್ನು ಬ್ಯಾಂಕ್ ಡ್ರಾಫ್ಟ್. ಎಂ.ಓ
ಮೂಲಕ ಸ್ವೀಕರಿಸಲಾಗುವುದು.